ಜಿಲ್ಲಾಧಿಕಾರಿಗಳ ಕಾರ್ಯಾಲಯ ಬೆಂಗಳೂರು ಜಿಲ್ಲೆ, ಬೆಂಗಳೂರು

ಅಧಿಕೃತ ಜ್ಞಾಪನ ಪತ್ರ

ನಂ:ಎಲ್ ಆರ್ ಎಫ್ (ಎ)ಸಿಆರ್.:06/2006-07 ಬೆಂಗಳೂರು, ದಿನಾಂಕ:21ನೇ ಜೂನ್ 2007

ವಿಷಯ : ಆನೇಕಲ್ ತಾಲ್ಲೂಕು ಜಿಗಣಿ ಹೋಬಳಿ, ಹುಲ್ಲಹಳ್ಳಿ ಗ್ರಾಮದ ಸ.ನಂ. 189/3, 191/1, 191/2, 191/5ರಲ್ಲಿನ ಒಟ್ಟು 3-18 ಎಕರೆ:ಗುಂಟೆ, ವಿಸ್ತೀರ್ಣ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109ರಡಿ " ಅಂಜುಮಾನ್-ಇ-ತಾಯಬಿ ದಾವೂದಿ ಬೊಹ್ರಾ ಜಮಾತ್, ಬೆಂಗಳೂರು ರವರು ಜಮೀನನ್ನು ಖರೀದಿಸಲು ಕಲಂ 109ರಡಿಯಲ್ಲಿ ಅನುಮತಿ ಕೋರಿರುವ ಬಗ್ಗೆ

"ಅಂಜುಮಾನ್-ಇ-ತಾಯಬಿ" ನಂ:53, ಲಾಲ್‌ಬಾಗ್ ಪೋರ್ಟ್ ರೋಡ್ ಬೆಂಗಳೂರು ರವರು ಜಿಗಣಿ ಹೋಬಳಿ, ಹುಲ್ಲಹಳ್ಳಿ ಗ್ರಾಮದ ಸ.ನಂ. 189/3ರಲ್ಲಿ 0-27 ಗುಂಟೆ, 191/1ರಲ್ಲಿ 0-38 ಗುಂಟೆ 191/2 ರಲ್ಲಿ 0-33 ಗುಂಟೆ, 191/5ರಲ್ಲಿ 1-00 ಎಕರೆ ಒಟ್ಟು 3-18 ಎಕರೆ:ಗುಂಟೆ, ವಿಸ್ತೀರ್ಣ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ನಮೂನೆ-15ಎ ರಲ್ಲಿ ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎಎರಲ್ಲಿ ತಹಶೀಲ್ದಾರ್, ಆನೇಕಲ್ ತಾಲ್ಲೂಕು ರವರು ಸಲ್ಲಿಸಿರುವ ಚೆಕ್ ಲಿಸ್ಟ್ ನಲ್ಲಿ ನೀಡಿದ ಮಾಹಿತಿ ಅನುಸರಿಸಿ, ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪವಿಭಾಗ ರವರ ಪತ್ರದ ನಂ.ಎಲ್.ಆರ್.ಎಫ್. (109) ಸಿಆರ್:2/07-08 ದಿನಾಂಕ:30.5.2007ರಲ್ಲಿ ಪ್ರಸ್ತಾಪಿತ ಆನೇಕಲ್ ತಾಲ್ಲೂಕು ಜಿಗಣಿ ಹೋಬಳಿ, ಹುಲ್ಲಹಳ್ಳಿ ಗ್ರಾಮದ ಸ.ನಂ. 189/3ರಲ್ಲಿ 0-27 ಗುಂಟೆ, 191/1ರಲ್ಲಿ 0-38 ಗುಂಟೆ, 191/2 ರಲ್ಲಿ 0-33 ಗುಂಟೆ, 191/5ರಲ್ಲಿ 1-00 ಎಕರೆ ಒಟ್ಟು 3-18 ಎಕರೆ :ಗುಂಟೆ ವಿಸ್ತೀರ್ಣ ಜಮೀನನ್ನು ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರಡಿ ಅನುಮತಿ ನೀಡಲು ವರದಿ ಮಾಡಿರುತ್ತಾರೆ. ಸದರಿ ಅರ್ಜಿದಾರರು "ಅಂಜುಮಾನ್-ಇ-ತಾಯಬಿ" ಬದಲಾಗಿ "ಅಂಜುಮಾನ್-ಇ-ತಾಯಬಿ ದಾವೂದಿ ಬೊಹ್ರಾ ಜಮಾತ್" ಬೆಂಗಳೂರು ಇವರ ಹೆಸರಿಗೆ ಜಮೀನು ಖರೀದಿಸಲು ಅನುಮತಿ ಕೋರಿ ಮನವಿ ಸಲ್ಲಿಸಿದ್ದು, ಎರಡು ಸಂಸ್ಥೆಗಳು ಡಾ:ಸೈದಾನ್ ಮೊಹಮ್ಮದ್ ಬುರ್ ಹನ್ನುದ್ದೀನ್ ಸಾಹೇಬ್ (ಟಿ.ಯು.ಎಸ್) ಇವರಿಗೆ ಸೇರಿರುವುದಾಗಿ ಪ್ರಮಾಣ ಪತ್ರ ಸಲ್ಲಿಸಿರುತ್ತಾರೆ.

ಸದರಿ ಸಂಸ್ಥೆಯು ಉಪನೋಂದಣಾಧಿಕಾರಿಗಳು, ಮೈಸೂರು ಉತ್ತರ, ರವರ ಕಛೇರಿಯಲ್ಲಿ ನಂ. ಎಂ.ವೈಎನ್-4-02098/2006-07 ರಂದು ನೊಂದಾಯಿಸಲ್ಪಟ್ಟಿದೆ.

ಪ್ರಸ್ತಾಪಿತ ಜಮೀನುಗಳು ಪರಿಶಿಷ್ಟ ಜಾತಿ/ ಪರಿಶೀಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಟುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 02 ಯೂನಿಟ್ ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯ್ದೆ 1995 ರ ಪ್ರಕಾರ ಕಲಂ 109 (i) (ii) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಹುಲ್ಲಹಳ್ಳಿ ಗ್ರಾಮದ ಸ.ನಂ. 189/3ರಲ್ಲಿ 0-27 ಗುಂಟೆ, 191/1ರಲ್ಲಿ 0-38 ಗುಂಟೆ, 191/2 ರಲ್ಲಿ 0-33 ಗುಂಟೆ, 191/5ರಲ್ಲಿ 1-00 ಎಕರೆ ಒಟ್ಟು 3-18 ಎಕರೆ:ಗುಂಟೆ, ವಿಸ್ತೀರ್ಣ ಜಮೀನನ್ನು "ಅಂಜುಮಾನ್-ಇ-ತಾಯಬಿ ದಾವೂದಿ ಬೊಹ್ರಾ ಜಮಾತ್ ಬೆಂಗಳೂರು" ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (i) (ii) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ:ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ:23.4.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 02 ಯೂನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ ಅದರಂತೆ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಪ್ರಸ್ತಾಪಿತ ಟ್ರಸ್ಟ್‌ಗೆ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್ ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೋಣೆಮಾಡಿ ಸಾಲ ಪಡೆಯುವುದನ್ನು ಹೊರತು ಪಡಿಸಿ ಸದರಿ ಜಮೀನನ್ನು ನಿಗಧಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಶೈಕ್ಷಣಿಕ ಚಟುವಟಿಕೆಗಳಿಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.

4. ಈ ಜಮೀನುಗಳನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964 ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳಿದ್ದಲ್ಲಿ ಸಕ್ರಮಗೊಳಿಸಿಕೊಳ್ಳುವ ಷರತ್ತಿಗೆ ಒಳಪಡಿಸಿದೆ.

5. ಈ ಜಮೀನುಗಳನ್ನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ/ಒ/ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.

6. ಈ ಪ್ರಾಧಿಕಾರದಿಂದ 2 ಯೂನಿಟ್‌ಗಿಂತ ಹೆಚ್ಚಾಗಿ ಟ್ರಸ್ಟ್ ಜಮೀನು ಹೊಂದಲು ಅನುಮತಿ ಪಡೆದುಕೊಂಡಿದ್ದಲ್ಲಿ ಈಗ ನೀಡುತ್ತಿರುವ ಅನುಮತಿಯು ಸೇರಿದಂತೆ ಹಾಗೂ ಅಕ್ರಮವೆನಿಸಿದ ದಾಖಲೆಗಳ ಮೂಲಕ ಅನಮತಿ ಪಡೆದಿದ್ದಲ್ಲಿ ಈಗ ನೀಡುತ್ತಿರುವ ಅನುಮತಿಯು ತನಗೆ ತಾನೇ ರದ್ದುಗೊಳ್ಳುತ್ತದೆ.

7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ನೀಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

8. ಪ್ರಶ್ನತ ಜಮೀನನ್ನು ಇತ್ತೀಚಿನ ಮಾರುಕಟ್ಟೆ ಬೆಲೆಗೆ ಮಾರಾಟ ಮಾಡತಕ್ಕದ್ದು.

9. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.

ಪಿ.ಆರ್. 886

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು

**ಆರ್ಥಿಕ ಇಲಾಖೆ**

**ಅಧಿಸೂಚನೆ**

**ಸಂಖ್ಯೆ:ಆಇ 228 ವಾತೆಸಿ 2006, ಬೆಂಗಳೂರು, ದಿನಾಂಕ:24ನೇ ಜುಲೈ 2007**

**ವಿಷಯ :** ಶ್ರೀ ಸಿ.ಜಿ. ಶ್ರೀಧರ್, ವಾಣಿಜ್ಯ ತೆರಿಗೆ ಉಪ ಆಯುಕ್ತರು, ಇವರ ಜೇಷ್ಠತೆ ನಿಗಧಿಪಡಿಸುವ ಬಗ್ಗೆ

**ಉಲ್ಲೇಖ :** 1) ಅಧಿಸೂಚನೆ ಸಂಖ್ಯೆ:ಆಇ 204 ವಾತೆಸಿ 96 ದಿ:20–3–97
2) ಅಧಿಸೂಚನೆ ಸಂಖ್ಯೆ:ಆಇ 191 ವಾತೆಸಿ 2002, ದಿ:19–10–2002
3) ಅಧಿಸೂಚನೆ ಸಂಖ್ಯೆ:ಆಇ 228 ವಾತೆಸಿ 2006, ದಿ:7–5–2007

ಶ್ರೀ ಸಿ.ಜೆ. ಶ್ರೀಧರ್, ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ವೃಂದ (ಹಿಂದಿನ ವಾಣಿಜ್ಯ ತೆರಿಗೆ ಅಧಿಕಾರಿ)ದಲ್ಲಿ ತಮ್ಮ ಜೇಷ್ಠತೆಯ ಕುರಿತಂತೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಸಲ್ಲಿಸಿದ್ದ ಅರ್ಜಿ ಸಂಖ್ಯೆ:2323/97ರ ಬಗ್ಗೆ ಗೌ:ನ್ಯಾಯ ಮಂಡಳಿಯು ದಿ:8–3–2006ರ ಆದೇಶದಲ್ಲಿ ನೀಡಿರುವ ನಿರ್ದೇಶನದ ಹಿನ್ನಲೆಯಲ್ಲಿ ಇವರ ಜೇಷ್ಠತೆಯನ್ನು ನಿಗಧಿಪಡಿಸುವ ಬಗ್ಗೆ ಸರ್ಕಾರವು ಪರಿಶೀಲಿಸಿ ಇವರ ಜೇಷ್ಠತೆಯನ್ನು ನಿಗಧಿಪಡಿಸುವ ಬಗ್ಗೆ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ವೃಂದದಲ್ಲಿ 1985ರ ನೇರ ನೇಮಕಾತಿ ತಂಡದಲ್ಲಿ ಕೊನೆಯ ಅಧಿಕಾರಿಯಾದ ಶ್ರೀ ಎಸ್.ಕೆ. ನಾಯ್ಕರ್, ಇವರ ನಂತರ ಅಂದರೆ ಮೇಲೆ (1)ರಲ್ಲಿ ಹೊರಡಿಸಲಾದ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಕ್ರಮ ಸಂಖ್ಯೆ:469ಎ ಎಂದು ಹಾಗೂ ವಾಣಿಜ್ಯ ತೆರಿಗೆ ಉಪ ಆಯುಕ್ತರ ವೃಂದದಲ್ಲಿಯೂ ಸಹ ಶ್ರೀ ಎಸ್.ಕೆ. ನಾಯ್ಕರ್, ಇವರ ನಂತರ ಮೇಲೆ (2)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಹೊರಡಿಸಿರುವ ಉಪ ಆಯುಕ್ತರ ವೃಂದದ ಅಂತಿಮ ಜೇಷ್ಠತಾಪಟ್ಟಿಯಲ್ಲಿ ಕ್ರ.ಸಂ 311ಎ ಎಂದು ನಿಗಧಿಪಡಿಸಲು ಸರ್ಕಾರವು ತೀರ್ಮಾನಿಸಿತ್ತು. ಅದರಂತೆ ಮೇಲೆ (3) ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಜೇಷ್ಠತೆಯನ್ನು ನಿಗಧಿಪಡಿಸಿ, ಇದರಿಂದ ಬಾಧಿತರಾದವರು ಆಕ್ಷೇಪಣೆಗಳನ್ನು 15 ದಿನಗಳೊಳಗೆ ಲಿಖಿತ ಮೂಲಕ ಸಲ್ಲಿಸತಕ್ಕದ್ದೆಂದು ಸೂಚಿಸಲಾಗಿತ್ತು

ಈ ರೀತಿ ಪ್ರಕಟಿಸಿದ ಜೇಷ್ಠತಾ ಪಟ್ಟಿಗೆ ಸಂಬಂಧಿಸಿದಂತೆ ಆಕ್ಷೇಪಣೆಗಳನ್ನು ಸ್ವೀಕರಿಸಲಾಗಿದ್ದು, ಸದರಿ ಪ್ರಕರಣವನ್ನು ಸರ್ವೋಚ್ಛ ನ್ಯಾಯಾಲಯವು Sri B.S. Bajwa V/s State of Punjab ಪ್ರಕರಣದಲ್ಲಿ ನೀಡಿರುವ ತೀರ್ಪಿನ ಆಧಾರದ ಮೇಲೆ ನಿರ್ಧಾರ ತೆಗೆದುಕೊಳ್ಳುವಂತೆ ಆಕ್ಷೇಪಿಸಿದ್ದರು. ಸದರಿ ಆಕ್ಷೇಪಣೆಗಳನ್ನು ಸವಿವರವಾಗಿ ನಿಯಮಾನುಸಾರ ಪರಿಶೀಲಿಸಲಾಯಿತು ಆದರೆ ಪ್ರಸ್ತುತ ಪ್ರಕರಣದಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಅರ್ಜಿ ಸಂ. 2323/97ರಲ್ಲಿ ದಿನಾಂಕ:8–3–2006ರ ಆದೇಶದ ಹಿನ್ನಲೆಯಲ್ಲಿ ಶ್ರಿ ಸಿ.ಜಿ. ಶ್ರೀಧರ್ ರವರ ಜೇಷ್ಠತೆಯನ್ನು ಮರುಪರಿಶೀಲಿಸಿ ನಿಗಧಿಪಡಿಸಲು ಆಸ್ಪದ ಇರುವುದರಿಂದ, Sri B.S. Bajwa V/s State of Punjab ಪ್ರಕರಣದಲ್ಲಿ ಸರ್ವೋಚ್ಛ ನ್ಯಾಯಾಲಯ ನೀಡಿರುವ ತೀರ್ಪು ಈ ಪ್ರಕರಣಕ್ಕೆ ಅನ್ವಯವಾಗುವುದಿಲ್ಲ. ಈ ಹಿನ್ನಲೆಯಲ್ಲಿ ಪ್ರಕರಣವನ್ನು ಮರುಪರಿಶೀಲಿಸಿ ಶ್ರೀ ಸಿ.ಜಿ ಶ್ರೀಧರ್ ರವರು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಹುದ್ದೆಯಲ್ಲಿ ನೇಮಕಾತಿ ಹೊಂದಿದ ದಿನಾಂಕದಿಂದ ನಿರಂತರವಾಗಿ ಸೇವೆಯಲ್ಲಿ ಮುಂದುವರೆದಿರುವುದರಿಂದ, 1986 ರಿಂದ ಅವರು ಸಲ್ಲಿಸಿರುವ ಸೇವೆಯನ್ನು ಪರಿಗಣಿಸಿ, ಇವರ ಜೇಷ್ಠತೆಯನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ವೃಂದದಲ್ಲಿ 1985ರ ನೇರ ನೇಮಕಾತಿ ತಂಡದ ಕೊನೆಯ ಅಧಿಕಾರಿಯಾದ ಶ್ರೀ ಎಸ್.ಕೆ.

ನಾಯ್ಕರ್ ರವರ ನಂತರ ಕ್ರಮ ಸಂಖ್ಯೆ:469ಎ ಆಗೂ ವಾಣಿಜ್ಯ ತೆರಿಗೆ ಉಪ ಆಯುಕ್ತರ ವೃಂದದಲ್ಲಿಯೂ ಸಹ ಶ್ರೀ ಎಸ್. ಕೆ. ನಾಯ್ಕರ್ ಇವರ ನಂತರ ಕ್ರಮ ಸಂಖ್ಯೆ:311ಎ ಎಂದು ನಿಗಧಿಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1024

**ಮಹಬೂಬ್ ಖಾನ್**

ಪೀಠಾಧಿಕಾರಿ

ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2)

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಹಾವೇರಿ ವಿಭಾಗ ಇವರ ನ್ಯಾಯಾಲಯದಲ್ಲಿ**

**ನಂ:ಎ5/ಅಮೊ/ವಾಹನ/ಕೆಎ17/ಎಂ–5647/ಮಾ.ಕಾರು/07–08 ಹಾವೇರಿ ದಿನಾಂಕ:13ನೇ ಜುಲೈ 2007**

ಉಪಸ್ಥಿತರು : ಶ್ರೀ. ಆರ್. ಗೋಕುಲ, ಭಾ.ಅ.ಸೇ
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು
ಹಾವೇರಿ ವಿಭಾಗ, ಹಾವೇರಿ

**ಫಿರ್ಯಾಧಿದಾರರು :** ಪಿ.ಎಸ್.ಐ. ಹಲಗೇರಿ

**ಆರೋಪಿಗಳು :** ಪತ್ತೆಯಾಗಿರುವುದಿಲ್ಲ

**ಬಾಧ್ಯತೆದಾರರು :** ಯಾರು ಬಂದಿರುವುದಿಲ್ಲ

**ಪ್ರಸ್ತಾವನೆ:**

ದಿನಾಂಕ: 19.6.2005 ರಂದು ಆರಕ್ಷಕ ಉಪ ನಿರೀಕ್ಷಕರು, ಆರಕ್ಷಕ ಠಾಣೆ ಹಲಗೇರಿ ಇವರಿಗೆ ಬಂದ ವರ್ತಮಾನದ ಪ್ರಕಾರ, ಹಲಗೇರಿ ಪೊಲೀಸ್ ಠಾಣೆ ಹದ್ದಿನಲ್ಲಿ ಹಲಗೇರಿ–ತುಮ್ಮಿನಕಟ್ಟಿ ರಸ್ತೆಯ ಮೇಲೆ ಅಂತರವಳ್ಳಿಕ್ರಾಸ್ ಬಳಿ ಯಾರೊ ಒಬ್ಬರು ದೂರವಾಣಿ ಮೂಲಕ ಶೀವಮೊಗ್ಗ ಕಡೆಯಿಂದ ಬಂದ ಬಿಳಿ ಬಣ್ಣದ ಮಾರುತಿ ಕಾರ್ ನಂ ಕೆಎ17/ಎಂ–5647 ಕಾರಿನಲ್ಲಿ ಅಕ್ರಮವಾಗಿ ಶ್ರೀಗಂಧದ ಕಟ್ಟಿಗೆಯನ್ನು ಸಾಗಾಟ ಮಾಡುತ್ತಿದ್ದು ಹಲಗೇರಿ–ತುಮ್ಮಿನಕಟ್ಟಿ ಮಾರ್ಗವಾಗಿ ಬೆಳಗಾವಿ ಕಡೆಗೆ ಹೋಗುತ್ತಿದೆ ಅಂತಾ ತಿಳಿಸಿದ್ದರಿಂದ ಪಿ.ಎಸ್.ಐ ಹಲಗೇರಿಯವರು ಈ ವಿಷಯವನ್ನು ತಕ್ಷಣ ಡಿ.ವೈ.ಎಸ್.ಪಿ ರಾಣೇಬೆರನ್ನೂರವರಿಗೆ ತಿಳಿಸಿ ಅವರ ಮಾರ್ಗದರ್ಶನದಂತೆ ವಿಶೇಷ ದಳದ ಸಿಬ್ಬಂದಿಗಳೊಂದಿಗೆ ಸರ್ಕಾರಿ ಜೀಪಿನಲ್ಲಿ ಮಧ್ಯಾಹ್ನ 1.30 ಗಂಟೆಗೆ ಹೊರಟು 2.00 ಗಂಟೆ ಸುಮಾರಿಗೆ ತಲುಪಿ ಜೀಪನ್ನು ಮರೆಯಾಗಿಟ್ಟು ತುಮ್ಮುನಕಟ್ಟಿ ರಸ್ತೆಗೆ ಹೋಗಿ ಅಂತರವಳ್ಳಿ–ಆಲದಕಟ್ಟಿ ಕ್ರಾಸ್‌ನಲ್ಲಿ ಮರೆಯಾಗಿ ನಿಂತು ತುಮ್ಮಿನಕಟ್ಟಿ ಕಡೆಯಿಂದ ಬರುವ ಬಿಳಿ ಮಾರುತಿ ಕಾರಿಗಾಗಿ ಕಾಯುತ್ತ ನಿಂತಾಗ ಮಧ್ಯಾಹ್ನ 3.00 ಗಂಟೆಗೆ ತುಮ್ಮಿನಕಟ್ಟಿ ಕಡೆಯಿಂದ ಒಂದು ಬಿಳಿ ಮಾರುತಿ ಕಾರು ಬರುತ್ತಿರುವುದನ್ನು ನೋಡಿ ಅದನ್ನು ನಿಲ್ಲಿಸಿ ಚೆಕ್ ಮಾಡುವ ಸಲುವಾಗಿ ರಸ್ತೆಗೆ ಬಂದು ಅಡ್ಡನಿಂತು ಅದನ್ನು ನಿಲ್ಲಿಸಲು ಕೈ ಮಾಡುತ್ತ ಅಂತರವಳ್ಳಿ ಕ್ರಾಸ್ ಕಡೆಗೆ ಹೊರಟಾಗ ಕಾರಿನ ಚಾಲಕನು ಸ್ವಲ್ಪ ದೂರದಲ್ಲಿ ನಮ್ಮನ್ನು ನೋಡಿ ಸಂಶಯ ಬಂದು ಕ್ರಾಸ್ ಬಳಿ ಕಾರನ್ನು ಒಮ್ಮೆಲೆ ಬ್ರೆಕ್ ಹಾಕಿ ನಿಲ್ಲಿಸಿ ಕಾರಿನ ಬಾಗಿಲನ್ನು ತೆಗೆದು ಕಾರನ್ನು ಅಲ್ಲಿಯೇ ಬಿಟ್ಟು ಹೊಲಗಳಲ್ಲಿ ಹಾಯ್ದು ಓಡಲಿಕ್ಕೆ ಪ್ರಾರಂಭಿಸಿದನು. ಅವನನ್ನು ಬೆನ್ನಟ್ಟಿ ಸ್ವಲ್ಪ ದೂರದಲ್ಲಿಯೇ ಹಿಡಿದು ಕಾರಿನ ಬಳಿ ತರಲಾಯಿತು. ಅವನನ್ನು ವಿಚಾರ ಮಾಡಲಾಗಿ, ನನ್ನ ಹೆಸರು ಜಮ್ಮೀರಅಹ್ಮದಖಾನ್ S/o ಬಸೀರಅಹ್ಮದಖಾನ್, ವಯಸ್ಸು 28 ವರ್ಷ, ವಿಳಾಸ, ಅಜಾದ್, ನಗರ 3ನೇ ಕ್ರಾಸ್, ಶಿವಮೊಗ್ಗ ಅಂತಾ ಹೇಳಿದ್ದು, ಕಾರನ್ನು ಚೆಕ್ ಮಾಡಲಾಗಿ ಕಾರಿನ ಹಿಂದಿನ ಸೀಟನ್ನು ಕಿತ್ತು, ಅಲ್ಲಿ ಕಟ್ಟಿಗೆಯ ಸಣ್ಣ ಸಣ್ಣ ತುಂಡು ಹಾಗೂ ಚೆಕ್ಕಗಳನ್ನು ತುಂಬಿ ಮೇಲೆ ಸೀಟನ್ನು ಇಟ್ಟುದ್ದು, ಅಲ್ಲದೆ ಹಿಂದಿನ ಡಿಕ್ಕಿಯಲ್ಲಿಯೂ ಸಹ ಅದೇ ರೀತಿ ಚೆಕ್ಕೆ ಹಾಗೂ ತುಂಡುಗಳನ್ನು ತುಂಬಿದ್ದು ಅವುಗಳನ್ನು ತೆಗೆದು ವಾಸನೆ ನೋಡಲಾಗಿ ಅವು ಶ್ರೀಗಂದದ ಕಟ್ಟಿಗೆಯ ತುಂಡು ಹಾಗೂ ಚಕ್ಕೆಗಳೆಂದು ಖಾತ್ರಿಯಾಯಿತು,. ಅವುಗಳನ್ನು ಕೆಲವು ಗೋಣಿ ಚೀಲಗಳನ್ನು ತರಿಸಿ ತುಂಬಿ ಅವುಗಳನ್ನು ಎಲ್ಲಿಗೆ ಸಾಗಾಟ ಮಾಡುತ್ತಿದ್ದಿರಿ. ಇದಕ್ಕೆ ಏನಾದರೂ ಪಾಸು/ ಪರ್ಮಿಟ್ ಇದೆಯೇ? ಅಂತಾ ವಿಚಾರಿಸಲಾಗಿ ಅವನು ಯಾವುದೇ ಪಾಸು/ ಪರ್ಮಿಟ್ ಇರುವುದಿಲ್ಲ ಅಂತಾ ಹೇಳಿದ್ದು. ಆದರೆ ಎಲ್ಲಿಗೆ ಸಾಗಿಸುತ್ತಿರುವ ಎಂಬ ಬಗ್ಗೆ ಏನೂ ಹೇಳಲಿಲ್ಲ. ನಂತರ ಗೋಣಿಚೀಲಗಳಲ್ಲಿ ತುಂಬಿದ ಶ್ರೀಗಂಧದ ಕಟ್ಟಿಗೆಯನ್ನು ತೂಕಮಾಡಿ ನೋಡಲಾಗಿ ಒಟ್ಟು 150 ಕೆ.ಜಿ ಇದ್ದು ಜಪ್ತಿ ಮಾಡಿದ ಶ್ರೀಗಂಧದ ಕಟ್ಟಿಗೆಯನ್ನು ಠಾಣೆಗೆ ತಂದಿದ್ದು ಸದರಿ ಜಪ್ತಿ ಮಾಡಿದ ಶ್ರೀಗಂಧದ ಅಂದಾಜು ಬೆಲೆ ರೂ. 45000/– ಇದ್ದು ಈ ಶ್ರೀಗಂದದ ಕಟ್ಟಿಗೆಯನ್ನು ಎಲ್ಲೋ ಕಳುವಿನಿಂದ ಸಂಪಾದಿಸಿ ಯಾವುದೇ ಪಾಸು/ಪರ್ಮಿಟ್ ಇಲ್ಲದೇ ಅಕ್ರಮವಾಗಿ ಸಾಗಾಟ ಮಾಡುತ್ತಿರುವಾಗ ಸಿಕ್ಕಿದ್ದು ಇರುತ್ತದೆ.

ನಂತರ ಈ ವಾಹನದ ಆರ್.ಸಿ. ಪುಸ್ತಕ ಹಾಗೂ ಮಾಲೀಕರ ಬಗ್ಗೆ ತಿಳಿಯಲು, ಜಪ್ತಿ ಮಾಡಲಾದ ಮಾರುತಿ ಕಾರಿನಲ್ಲಿ ನೊಂದಣಿ ಸಂಖ್ಯೆ ಕೆಎ17/ಎಂ–5647 ಅಂತಾ ನಂಬರ್ ಪ್ಲೇಟ್ ಹಾಕಿದ್ದು, ಬಂಧಿತ ಆರೋಪಿಯಿಂದ ಕಾರಿನ ಮಾಲೀಕರ ವಿವರ ತಿಳಿದು ಬಾರದ್ದರಿಂದ ಪ್ರಾದೇಶಿಕ ಸಾರಿಗೆ ಅಧಿಕಾರಿ, ದಾವಣಗೆರೆಯವರಲ್ಲಿ ಪತ್ರ ವ್ಯವಹಾರ ಮಾಡಲಾಗಿ ಸದರಿ ವಾಹನ ದಾವಣಗೆರೆ ಪ್ರಾದೇಶಿಕ ಕಚೇರಿಯಲ್ಲಿ ನೊಂದಣಿಯಾಗಿರುವುದಿಲ್ಲ. ನಂತರ ವಾಹನ ಮಾಲೀಕರ ಪತ್ತೆಗಾಗಿ ವಾಹನದಲ್ಲಿ ನಮೂದ ಇದ್ದ ಚೆಸ್ಸಿ ನಂ:ಎಸ್‌ಬಿ308ಐಎನ್ 1509329 ಮತ್ತು ಇಂಜೀನ್ ನಂ:ಎಫ್ 8 ಡಿ ಎನ್ 1038991

ಆಧಾರದ ಮೇಲೆ ಮಾಲೀಕರನ್ನು ಪತ್ತೆ ಮಾಡಲು ಆರ್‌ಟಿಓ, ಶಿವಮೊಗ್ಗ ಹಾಗೂ ಮಾರುತಿ ಶೋ ರೂಲ್ (ಶೃತಿ ಮೋಟಾರ್ಸ್) ಶಿವಮೊಗ್ಗ ಇವರಲ್ಲಿಯೂ ಸಹ ಪರಿಶೀಲನೆ ಮಾಡಿಸಿದಾಗ್ಯೂ ಕಾರಿನ ಮಾಲೀಕರು ಪತ್ತೆಯಾಗಿರುವುದಿಲ್ಲ. ಸದರಿ ಪ್ರಕರಣದಲ್ಲಿ ವಶಪಡಿಸಿಕೊಳ್ಳಲಾದ 150 ಕೆಜಿ ಶ್ರೀಗಂಧದ ಕಟ್ಟಿಗೆಯಲ್ಲಿ ಮಾದರಿಗಾಗಿ ತೆಗೆದ 5 ಕೆಜಿ ತೂಕದ 5 ತುಂಡುಗಳನ್ನು ಹೊರತುಪಡಿಸಿ ಉಳಿದ 145 ಕೆಜಿ ಶ್ರೀಗಂಧದ ಕಟ್ಟಿಗೆ ಹಾಗೂ ಬಿಳಿ ಮಾರುತಿ ಕಾರಿನ ಚೆಸ್ಸಿ ನಂ ಎಸ್‌ಬಿ 308 ಐಎನ್ 1509329 ಮತ್ತು ಇಂಜೀನ್ ನಂ:ಎಫ್8 ಡಿ ಎನ್ 1038991 ನೇದ್ದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಕರಿತು ಪಿ.ಎಸ್.ಐ. ಹಲಗೇರಿ ಇವರು ಗುನ್ನೆ ನಂ 76/05 ಕಲಂ 379 ಐ.ಪಿ.ಸಿ ಮತ್ತು 86–87 ಕೆ.ಎಫ್.ಎ.ಸಿ ರ ಪ್ರಕಾರ ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಹಾವೇರಿ ಇವರ ನ್ಯಾಯಾಲಯದಲ್ಲಿ ಹಾಜರುಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿ ಇಡಲು ವಲಯ ಅರಣ್ಯ ಅಧಿಕಾರಿ ರಾಣೇಬೆನ್ನೂರು ಇವರ ಸುರ್ಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ. ಅದರಂತೆ ದಿನಾಂಕ:12/8/2005 ರಂದು ವಲಯ ಅಧಿಕಾರಿ ರಾಣೇಬೆನ್ನೂರವರು ಆರಕ್ಷಕ ಉಪ ನಿರೀಕ್ಷಕ ಹಲಗೇರಿ ಇವರ ಗುನ್ನೆ ನಂ. 76/05–06 ನೇದರಲ್ಲಿ ಜಪ್ತಿಪಡಿಸಿಕೊಂಡ ಶ್ರೀಗಂಧದ 135.3 ಕೆ.ಜಿ ಹಾಗೂ ಮಾರುತಿ ಕಾರನ್ನು ಹಸ್ತಾಂತರಿಸಿಕೊಂಡಿರುವುದಾಗಿ ದಿನಾಂಕ:17/8/2005 ರಲ್ಲಿ ವರದಿ ಮಾಡಿರುತ್ತಾರೆ. ನಂತರ ಈ ವಾಹನದ ಆರ್.ಸಿ. ಮಾಲೀಕರ ಬಗ್ಗೆ ತಿಳಿಯಲು ಈ ನ್ಯಾಯಾಲಯದ ಪತ್ರ ಸಂಖ್ಯೆ:ಎ3/ಅ.ಮೊ/71/ವಾಹನ/ವಿವರ/05–06/998 ದಿನಾಂಕ:6/9/2005 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ ದಾವಣಗೇರಿ ಇವರಿಗೆ ಪತ್ರ ಬರೆದು ಈ ವಾಹನದ ಮಾಲಿಕತ್ವದ ಬಗ್ಗೆ ವಿವರ ಒದಗಿಸಲು ತಿಳಿಸಲಾಗಿತ್ತು. ಸದರಿಯವರಿಂದ ಯಾವುದೇ ಮಾಹಿತಿ ಪ್ರಾಪ್ತಾವಾಗಿರುವುದಿಲ್ಲ.

ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕೆ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಪ್ರಕಟಣೆಯನ್ನು ದಿನಾಂಕ:6/9/2005 ರಂದು ಹೊರಡಿಸಿ ಪ್ರತಿಯನ್ನು ನಿರ್ದೇಶಕರು ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಮತ್ತು ಸಂಕಲನಾಧಿಕಾರಿಗಳು ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಪ್ರಕಟಣೆಯನ್ನು ದಿನಾಂಕ:15/9/2005 ರಂದು ಗೆಜೆಟ್‌ನಲ್ಲಿ ಪ್ರಕಟಣೆಗೊಂಡು 30 ದಿನಗಳಾದರೂ ಆರ್.ಸಿ. ಮಾಲಿಕರಾಗಲಿ ಅಥವ ಅವರ ಪರ ವಕೀಲರಾಗಲಿ ಈ ನ್ಯಾಯಾಲಯಕ್ಕೆ ಕಾನೂನುಬದ್ಧವಾಗಿ ದಾಖಲೆಗಳನ್ನು ಅರ್ಜಿಮೂಲಕ ಸಲ್ಲಿಸಿ ವಾಹನ ಬಿಡುಗಡೆಗೆ ಕೋರಿರುವುದಿಲ್ಲ.

ಅರ್ಜಿದಾರ ಶ್ರೀ ಜಮ್ಮೀರಅಹ್ಮದಖಾನ್ ಇವರ ಪರ ವಕೀಲರು ಅರ್ಜಿ ಸಲ್ಲಿಸಿ ವಾಹನ ಸಂಖ್ಯೆ ಕೆಎ 17/ಎಂ–5647 ಇದು ತನ್ನ ಅರ್ಜಿದಾರರಿಗೆ ಸಂಬಂಧಿಸಿದ್ದು ಇರುವುದಿಲ್ಲ. ಹಾಗೂ ವಾಹನದಲ್ಲಿನ ಯಾವುದೇ ಸ್ವೀಕೃತಿಗೆ ತನ್ನ ಕ್ಲೆಮು ಇರುವುದಿಲ್ಲಾ ಮಾನ್ಯ ನ್ಯಾಯಾಲಯವು ಸದರಿ ವಾಹನಕ್ಕೆ ಸಂಬಂಧಿಸಿದಂತೆ, ತನ್ನಲ್ಲಿ ಯಾವುದೇ ದಾಖಲೆಗಳು ಇರುವುದಿಲ್ಲವಾದ್ದರಿಂದ ವಾಹನವನ್ನು ಯಾವುದೇ ರೀತಿಯಲ್ಲಿ ವಿಲೆಮಾಡಲು ಆಕ್ಷೇಪಣೆ ಇರುವುದಿಲ್ಲವೆಂದು ಲಿಖಿತ ಹೇಳಿಕೆ ನೀಡಿರುತ್ತಾರೆ.

ಮುಂದುವರೆದು ಈ ನ್ಯಾಯಾಲಯದಿಂದ ದಿನಾಂಕ:16/4/2007 ರಂದು ಪುನಃ ಪ್ರಾದೇಶಿಕ ಸಾರಿಗೆ ಅಧಿಕಾರಿಯವರಿಗೆ ಮಾರುತಿ ಕಾರ್ ನಂ. ಕೆ.ಎ 17/ಎಂ–5647 ನೇದ್ದರ ಮಾಲೀಕತ್ವದ ಬಗ್ಗೆ ವಿವರ ಒದಗಿಸಲು ತಿಳಿಸಲಾದಂತೆ ಸದರಿಯವರು ದಿನಾಂಕ:3/5/2007 ರಂದು 'ಬಿ' ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ ಸದರಿ 'ಬಿ' ಪ್ರತಿಯಲ್ಲಿನ ಆರ್.ಸಿ. ಮಾಲೀಕರ ಹೆಸರಿನಂತೆ, ಶ್ರೀ ಶಿವಕುಮಾರ ಎಚ್.ಎನ್. S/o ದಿ:ಎಚ್.ಎಸ್. ನಾಗೇಂದ್ರಪ್ಪ 4593/12 3ನೇ ಮುಖ್ಯ ಲೇಔಟ್ 'ಬಿ' ಬ್ಲಾಕ್ ದಾವಣಗೆರೆ ಇವರಿಗೆ ದಿನಾಂಕ:5/7/2007 ರಂದು ಕೆ.ಎಫ್.ಎ. 1963 ಸೆಕ್ಷನ್ 71 (ಎ) ರ ಪ್ರಕಾರ ಸಮನ್ಸ ಜಾರಿ ಮಾಡಿ ದಿನಾಂಕ:13/7/2007 ರಂದು ಈ ನ್ಯಾಯಾಲಯಕ್ಕೆ ಹಾಜರಾಗಲು ಸೂಚಿಸಲಾಗಿತ್ತು. ಅದರಂತೆ, ಶ್ರೀ ಎಚ್.ಎನ್. ಶಿವಕುಮಾರ ದಿನಾಂಕ:13/7/2007 ರಂದು ಈ ನ್ಯಾಯಾಲಯದ ಮುಂದೆ ಹಾಜರಾಗಿ ತಾವು ಹೊಂದಿದ ವಾಹನ ಮಾರುತಿ ಕೆ.ಎ 17/ಎಂ–5647 ನೇದರ ಎಲ್ಲಾ ದಾಖಲೆಗಳನ್ನು ಹಾಜರುಪಡಿಸಿ ಜಪ್ತಿಪಡಿಸಿಕೊಂಡ ಕಾರಿಗೂ ಹಾಗೂ ತನ್ನ ಕಾರಿಗೂ ಯಾವುದೇ ಸಂಬಂಧವಿಲ್ಲ, ತನ್ನದು ಮಾರುತಿ ಕಾರ (ALTO) ಅದು ತನ್ನ ಬಳಿಯಲ್ಲಿಯೇ ಇರುತ್ತದೆ. ತನ್ನ ಕಾರಿನ ನಂಬರನ್ನು ಬೇರೆ ಯಾವುದೇ ಕಾರಿಗೆ ಅಳವಡಿಸಿಕೊಂಡಿರಬಹುದೆಂದು ಮಾನ್ಯ ನ್ಯಾಯಾಲಯವು ತಾನು ಹಾಜರುಪಡಿಸಿದ ದಾಖಲೆಗಳನ್ನು ಪರಿಶೀಲಿಸಿ ತನ್ನನ್ನು ಈ ವಿಷಯದಿಂದ ಬಿಡುಗಡೆ ಮಾಡಬೇಕಾಗಿ ಹೇಳಿಕೆ ನೀಡಿರುತ್ತಾರೆ.

ಅದರಂತೆ ಈ ನ್ಯಾಯಾಲಯವು ಸದರಿಯವರು ಹಾಜರುಪಡಿಸಿದ ದಾಖಲೆಗಳಿಗೂ ಹಾಗೂ ಜಪ್ತಿಪಡಿಸಿಕೊಂಡ ವಾಹನದ ದಾಖಲೆಗಳಿಗೂ ಹೊಲಿಸಿ ನೋಡಿ ಪರಿಶೀಲಿಸಲಾಗಿ ಈ ಕೆಳಗಿನ ಅಂಶಗಳು ಕಂಡುಬರುತ್ತದೆ.

ವಾಹನ ಸಂಖ್ಯೆ:ಕೆಎ 17/ಎಂ–5647 ನೇದರ ಮಾಲೀಕರಾದ ಶ್ರೀ ಶಿವಕುಮಾರ ಎಚ್.ಎನ್. ಇವರು ಹೊಂದಿದ ಆರ್.ಸಿ ಪುಸ್ತಕದಲ್ಲಿ ವಾಹನವು ಮಾರುತಿ (ALTO) ಆಗಿದ್ದು ವಾಹನದ ನೋಂದಣಿ ದಿನಾಂಕ:9/9/2005 ಮತ್ತು ಪ್ರಕರಣದ ದಿನಾಂಕ:19/6/2005 ಆಗಿರುತ್ತದೆ. ಜಪ್ತಿಪಡಿಸಿದ ಮಾರುತಿ ಕಾರ ಬಿಳಿ ಬಣ್ಣದಾಗಿದ್ದು ಚೇಸ್ಸಿ ನಂ. ಎಸ್.ಬಿ. 308–ಐಎನ್. 150932 ಮತ್ತು ಇಂಜಿನ್ ನಂ. ಎಫ್–8–ಎಇಎನ್–1038991 ಇದ್ದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ದಾವಣಗೇರಿಯವರು ನೀಡಿದ 'ಬಿ' ಫಾರಂ ನಲ್ಲಿರುವ ವಾಹನ ಸಂಖ್ಯೆ ಕೆಎ17/ಎಂ–5647 ಆಗಿದ್ದು ಚೇಸ್ಸಿ ನಂ MA3EYD81500-553673 ಮತ್ತು ಇಂಜಿನ್ ನಂ. ಎಫ್–8–ಡಿಎನ್–3199222 ಎಂಬುದಾಗಿ ಇರುವುದಿಂದ ಶ್ರೀ ಶಿವಕುಮಾರ ಇವರ ವಾಹನವು ಅವರ

ತಾಬಾದಲ್ಲಿಯೇ ಇದ್ದು ಜಪ್ತಪಡಿಸಿಕೊಂಡ ವಾಹನವು ಬೇರೆ ಯಾರದೋ ಇದ್ದು ಮಾರುತಿ–800 (ಬಿಳಿ ಬಣ್ಣದ) ಕಾರಾಗಿರುವುದಿಂದ ಸದರಿಯವರನ್ನು ನ್ಯಾಯಾಲಯದ ನಡವಳಿಕೆಯಿಂದ ಕೈಬಿಡಲು ತೀರ್ಮಾನಿಸಲಾಯಿತು.

ಸಹಾಯಕ ಸರಕಾರಿ ಅಭಿಯೋಜಕರು ದಿನಾಂಕ:13/7/2007 ರಂದು ವಾದಮಂಡಿಸಿ ವಾಹನದಲ್ಲಿ ಶ್ರೀಗಂದದ ಕಟ್ಟಿಗೆಗಳನ್ನು ಸಾಗಿಸಿದ ಬಗ್ಗೆ ಪಿ.ಎಸ್.ಐ. ಹಲಗೇರಿ ಇವರು ಮಹಜರ ಪ್ರತಿ ಪ್ರಥಮ ವರ್ತಮಾನ ವರದಿ ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುವುದಿಂದ ಈ ವಾಹನದಲ್ಲಿ ಶ್ರೀಗಂಧದ ಕಟ್ಟಿಗೆಯನ್ನು ಅಕ್ರಮವಾಗಿ ಸಾಗಿಸುತ್ತಿರುವುದು ಸಾಬಿತಾಗಿರುತ್ತದೆ. ವಾಹನ ಮಾಲಿಕರಾಗಲಿ ಅಥವಾ ಅವರ ಪ್ರತಿನಿಧಿಗಳಾಗಲಿ ಯಾರು ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನ ಸಾಗಾಣಿಕೆ ಮಾಡದಿರುವ ಬಗ್ಗೆ ಈ ನ್ಯಾಯಾಲಯಕ್ಕೆ ಯಾವುದೇ ಸಾಕ್ಷಾಧಾರಗಳನ್ನು ಹಾಜರುಪಡಿಸಿರುವುದಿಲ್ಲ. ಆದ್ದರಿಂದ ವಾಹನ ಮತ್ತು ಶ್ರೀಗಂಧದ ಕಟ್ಟಿಗೆಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಮೂಲಕ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ, ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮಾರುತಿ–800 ಬಿಳಿ ಬಣ್ಣದ ಕಾರ ಸಂಖ್ಯೆ:ಕೆಎ17/ಎಂ–5647 ವಶಪಡಿಸಿಕೊಂಡು ಸುಮಾರು 2 ವರ್ಷ ಕಳೆದರೂ ವಾಹನಕ್ಕೆ ಸಂಬಂಧಪಟವರು ಯಾರೂ ಸೂಕ್ತ ದಾಖಲಾತಿಯೊಂದಿಗೆ ವಾಹನದ ಮಾಲಿಕತ್ವವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ ಇದರಿಂದ ಈ ವಾಹನವು ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿಲ್ಲವೆನ್ನುವುದನ್ನು ಸಾಬೀತುಪಡಿಸಲು ವಾಹನ ಮಾಲೀಕರು ವಿಫಲರಾಗಿರುತ್ತಾರೆ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

## ಆದೇಶ

ಮೇಲ್ಕಂಡ ಎಲ್ಲಾ ವಿದ್ಯಮಾನಗಳನ್ನು ಗಣನೆಗೆ ತೆಗೆದುಕೊಂಡು ಆರ್. ಗೋಕುಲ್ ಭಾ.ಅ.ಸೇ ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಹಾವೇರಿ ವಿಭಾಗ, ಹಾವೇರಿ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71 (ಎ) ರಿಂದ (ಜಿ) ಪ್ರಕಾರ ಪಿ.ಎಸ್.ಐ. ಹಲಗೇರಿ ಇವರು ಜಪ್ತ ಮಾಡಿದ ವಾಹನ ಸಂಖ್ಯೆ:ಕೆ.ಎ. 17/ಎಂ–5647 ಮಾರುತಿ–800 (ಬಿಳಿ ಬಣ್ಣದ ಕಾರು) ಮತ್ತು ಈ ವಾಹನದಲ್ಲಿದ್ದ ಶ್ರೀಗಂಧದ ಕಟ್ಟಿಗೆ 135.3 ಕೆ.ಜಿ ಕರ್ನಾಟಕ ಸರಕಾರದ ಸಂಪತ್ತಾಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರಕಾರಕ್ಕೆ ಅನುಕೂಲಕರವಾಗಿ ವಿಲೆ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ ಗಣಕ ಯಂತ್ರದಲ್ಲಿ ಮುದ್ರಸಿ ನಂತರ ಸರಿಪಡಿಸಿ ದಿನಾಂಕ:13/7/2007 ರಂದು ನನ್ನ ಸಹಿ ಹಾಗೂ ಮೊಹರಿನಲ್ಲಿ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳೊಳಗಾಗಿ ಯಾರೂ ಈ ನ್ಯಾಯಾಲಕ್ಕೆ ಹಕ್ಕು ಬಾದ್ಯತೆ ಅರ್ಜಿ ಸಲ್ಲಿಸದೇ ಹೊದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪಅರಣ್ಯ ಸಂರಕ್ಷಣಾಧಿಕಾರಿ
ಪಿ.ಆರ್. 1194 ಹಾವೇರಿ ವಿಭಾಗ, ಹಾವೇರಿ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಂತಿಮ ಅಧಿಸೂಚನೆ

### ನಂ.ಕೆ.ಎಸ್.ಎ:ಸಿಆರ್:16/06–07. ದಿನಾಂಕ:11ನೇ ಜುಲೈ 2007

ನಂ.ಕೆ.ಎಸ್.ಎ:ಸಿಆರ್:16/06–07 ದಿನಾಂಕ:10.1.2007 ರ ಪ್ರಿಲಿಮಿನರಿ ಅಧಿಸೂಚನೆಯನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಿ ಅದರಲ್ಲಿ ಸದರಿ ಅಧಿಸೂಚನೆಯ ಷೆಡ್ಯೂಲ್ ನಲ್ಲಿರುವ ಬೆಂಗಳೂರು ನಗರ ಅಂಬೇಡ್ಕರ್‌ನಗರ (ನಾಗಶೆಟ್ಟಿಹಳ್ಳಿ) ಕೊಳಚೆ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ನಿಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಪ್ರಾರಂಭಿಕವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ ಸಂಬಂಧಿಸಿದವರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು.

ಸದರಿ ಪ್ರಿಲಿಮಿನರಿ ಅಧಿಸೂಚನೆಗೆ ಸಂಬಂಧಿಸಿದಂತೆ ಸದರಿ ಪ್ರದೇಶದ ದಿನಾಂಕ:10.1.2007 ರ ಪ್ರಿಲಿಮಿನರಿ ಅಧಿಸೂಚನೆಯನ್ನು ಭೂ ಮಾಲೀಕರಿಗೆ ನೀಡಿ ಸದರಿ ಕೊಳಚೆ ಪ್ರದೇಶದ ಕೆಲವು ಕಡೆ ಗೋಡೆಗಳ ಮೇಲೆ ಅಂಟಿಸಿ ಪ್ರಚಾರವನ್ನು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಯವರು ಪಡಿಸಿದ್ದು, ಘೋಷಣೆಗೆ ಸಂಬಂಧಪಟ್ಟಂತೆ ಮಂಡಳಿಗೆ ಯಾವುದೇ ತಕರಾರು ಅರ್ಜಿ ಸ್ವೀಕೃತವಾಗಿರುವುದಿಲ್ಲವೆಂದು ಆಯುಕ್ತರು ದಿನಾಂಕ:18.6.2007ರ ಪತ್ರದಲ್ಲಿ ವರದಿ ಸಲ್ಲಿಸಿ ಈ ಪ್ರದೇಶದಲ್ಲಿ ಗುಡಿಸಲು ಇರುವುದರಿಂದ ಹಾಗೂ ಈ ಪ್ರದೇಶವು ಕೊಳಚೆ ಗುಣಲಕ್ಷಣಗಳನ್ನು ಹೊಂದಿರುವುದರಿಂದ ಇದನ್ನು ಕೊಳಚೆ ಪ್ರದೇಶವೆಂದು ಅಂತಿಮವಾಗಿ ಘೋಷಿಸುವಂತೆ ತಿಳಿಸಿರುತ್ತಾರೆ.

ಪ್ರಶ್ನಿತ ಕೊಳಚೆ ಪ್ರದೇಶದಲ್ಲಿ ಗುಡಿಸಲು/ಮನೆಗಳು ದುರಸ್ಥಿ ಇಲ್ಲದೇ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಅನಾರೋಗ್ಯದ ವಾತಾವರಣ ಉಂಟಾಗಿರುತ್ತದೆ. ಸದರಿ ಪ್ರದೇಶವನ್ನು ಅಭಿವೃದ್ಧಿಪಡಿಸುವುದು ಅತ್ಯಗತ್ಯವಾಗಿರುತ್ತದೆ. ಆದ್ದರಿಂದ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ದತ್ತವಾಗಿರುವ ಅಧಿಕಾರದಂತೆ ಈ ಕೆಳಕಂಡ ಷೆಡ್ಯೂಲ್ ನಲ್ಲಿ ನಮೂದಿಸಿರುವ ಪ್ರದೇಶವನ್ನು ಮೇಲ್ಕಂಡ ಕಾಯ್ದೆಯ ಸೆಕ್ಷನ್ 3 ರಡಿಯಲ್ಲಿ ಅಂತಿಮವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿರುತ್ತೇನೆ.

**ಷೆಡ್ಯೂಲ್**

ಬೆಂಗಳೂರು ಉತ್ತರ ತಾಲ್ಲೂಕು, ಕಸಬಾ ಹೋಬಳಿ, ನಾಗಶೆಟ್ಟಿಹಳ್ಳಿ ಗ್ರಾಮದ ಪರಿಮಿತಿಯಲ್ಲಿರುವ ಅಂಬೇಡ್ಕರ್ ನಗರ (ನಾಗಶೆಟ್ಟಿಹಳ್ಳಿ)ಕೊಳಚೆ ಪ್ರದೇಶದ ಚಕ್ಕುಬಂದಿ ಹಾಗೂ ಹದ್ದುಬಸ್ತು ತಃಖ್ತೆ

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸರ್ವೆ ನಂ. | ವಿಸ್ತೀರ್ಣ (ಚ.ಅ) | ಚೆಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ಅಂಬೇಡ್ಕರ್ ನಗರ (ನಾಗಶೆಟ್ಟಿಹಳ್ಳಿ) ಕೊಳಚೆ ಪ್ರದೇಶ | N.T.I. ಹೌಸಿಂಗ್ ಕೋ–ಆಪರೇಟಿವ್ ಸೊಸೈಟಿ ಬಿ.ಡಿ.ಎ. ಪೂಜಪ್ಪ | 6 | 1.17 ಎಕರೆ: ಗುಂಟೆ | ರಿ.ಸ.ನಂ. 6ರ ಉಳಿಕೆ ಮತ್ತು ರಸ್ತೆ | ರಿ.ಸ. ನಂ. 6ರ ಉಳಿಕೆ | ರಿ.ಸ.ನಂ. 6ರ ಉಳಿಕೆ | ರಿ.ಸ.ನಂ. 6ರ ಉಳಿಕೆ |

**ಎಂ.ಎ. ಸಾಧಿಕ್**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು

ಪಿ.ಆರ್. 981

**ಉಪನಿರ್ದೇಶಕರ ಕಚೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಚಿತ್ರದುರ್ಗ**

**ಅಧಿಸೂಚನೆ ಜ್ಞಾಪನ**

**ಸಂ/ಇ3/ಸಿಆರ್/31/2000–01/409, ದಿನಾಂಕ:30ನೇ ಜೂನ್ 2007**

**ವಿಷಯ :** ಶ್ರೀಮತಿ ಉಷಾ, ಸಶಿ, ಸ.ಪ.ಪೂ. ಕಾಲೇಜು, [ಬಾಲಿಕಾ] ಚಿತ್ರದುರ್ಗ ರವರ ಮೇಲಿನ ಇಲಾಖಾ ವಿಚಾರಣೆ ಬಗ್ಗೆ–ಅಂತಿಮ ದಂಡನಾ ಆದೇಶ

**ಉಲ್ಲೇಖ :**
1) ಉಪ ಪ್ರಾಚಾರ್ಯರು, ಸಪಪೂಕಾ (ಬಾಲಿಕಾ) ಚಿತ್ರದುರ್ಗ ರವರ ಪ.ಸಂ:17/99 ದಿನಾಂಕ:9.6.99, 23.8.99, 16.9.09, 26.5.2000
2) ಉಪ ನಿರ್ದೇಶಕರು, ಚಿತ್ರದುರ್ಗ ರವರ ಪತ್ರ ಸಮ ಸಂಖ್ಯೆ ದಿ:31/10/2000 ದಿ:27/6/2000
3) ಸಹ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ವಿಭಾಗ, ಬೆಂಗಳೂರು ರವರ ಪ.ಸಂ:ಎ11/1690/ಹಿಂಬರಹ/31/2000–01 ದಿ:5/12/2000
4) ಉಪ ನಿರ್ದೇಶಕರು, ಚಿತ್ರದುರ್ಗ ರವರ ಅ.ಸ.ಪ.ಸಮ ಸಂಖ್ಯೆ:ದಿ:6/2/01 .9/7/01
5) ಉಪ ಪ್ರಾಚಾರ್ಯರು, ಸಪಪೂಕಾ (ಬಾಲಿಕಾ) ಚಿತ್ರದುರ್ಗ ರವರ ಪ.ಸಂ.:103/02 ದಿ 5/7/02
6) ಉಪ ನಿರ್ದೇಶಕರು, ಚಿತ್ರದುರ್ಗ ರವರ ಅ.ಸ.ಪ. ಸಮ ಸಂಖ್ಯೆ ದಿನಾಂಕ:3/9/02 7/4/03 & 5/4/03
7) ಉಪ ಪ್ರಾಚಾರ್ಯರು, ರವರ ಪ.ಸಂ.18/03–04 ದಿ:29/4/02
8) ಕರ್ನಾಟಕ ರಾಜ್ಯ ಪತ್ರ ಪ್ರಕಟಣೆ ದಿನಾಂಕ:8/5/03
9) ತಿಳುವಳಿಕೆ ಪತ್ರ ದಿನಾಂಕ:31/1/04
10) ವಿಚಾರಣಾಧಿಕಾರಿಗಳ ನೇಮಕದ ಆದೇಶ ದಿನಾಂಕ:25/3/04
11) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ:26/11/06
12) ಈ ಕಚೇರಿ ಅಂತಿಮ ಕಾರಣ ಕೇಳುವ ನೋಟೀಸ್ ದಿನಾಂಕ:23/5/07
13) ಪತ್ರಿಕಾ ಪ್ರಕಟಣೆಗೆ ಬರೆದ ಪತ್ರ ದಿನಾಂಕ:22/5/07
14) ರಾಜ್ಯ ದಿನ ಪತ್ರಿಕೆಗಳಲ್ಲಿ ಪ್ರಕಟವಾದ ದಿ:5/6/07 (ಮಂಗಳವಾರ)

ಶ್ರೀಮತಿ ಉಷಾ ಸಶಿ. ಸರ್ಕಾರಿ ಪದವಿ ಪೂರ್ವ ಕಾಲೇಜು,(ಬಾಲಿಕಾ) ಚಿತ್ರದುರ್ಗ ರವರು ದಿ:22/5/99 ರಿಂದ 18/8/99 ರವರೆಗೆ ಅನಾರೋಗ್ಯದ ನಿಮಿತ್ತ ರಜೆಯನ್ನು ಸಲ್ಲಿಸಿರುತ್ತಾರೆ. ನಂತರ ದಿನಾಂಕ:19/8/99ಕ್ಕೆ ಕರ್ತವ್ಯಕ್ಕೆ ಹಾಜರಾಗಬೇಕಿತ್ತು. ಆದರೆ ಹಾಜರಾಗಿರುವುದಿಲ್ಲ. ಈ ಕುರಿತು ಕರ್ತವ್ಯಕ್ಕೆ ಹಾಜರಾಗುವಂತೆ ನೊಂದಣಿ ಅಂಚೆ ಮೂಲಕ ಉಲ್ಲೇಕ–[1] ರ ದಿ:16/9/99ರಲ್ಲಿ ನೋಟೀಸ್ ನೀಡಿರುತ್ತಾರೆ. ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ದಿ:23/8/99ರಲ್ಲಿ ಶಾಲಾ ಕೆಲಸಕ್ಕೆ ಅನಧಿಕೃತ ಗೈರು ಹಾಜರಿಇ ಆಗಿರುವ ಕುರಿತು ಸೂಕ್ತ ಕ್ರಮಕೈಗೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ. ದಿ:9/6/99ರಲ್ಲಿ ಸದರಿ ಶಿಕ್ಷಕಿಯವರು ರಜೆಯನ್ನು ದಿ:18/8/99ರವರೆಗೆ ರಜೆ ಮುಂದುವರೆಸಿರುವುದಾಗಿ ವರದಿ ಮಾಡಿರುತ್ತಾರೆ.ನಂತರ ದಿ:26/5/2000ರ ಪತ್ರದಲ್ಲಿ ಸದರಿ ಶಿಕ್ಷಕಿಯವರಿಗೆ ಕಳುಹಿಸಿದ ಪತ್ರಗಳು ವಾಪಸ್ಸು ಬಂದಿರುವುದಾಗಿ ಉಪ ಪ್ರಾಚಾರ್ಯರು, ವರದಿ ಮಾಡಿರುತ್ತಾರೆ. ಇವರ ಅನಧಿಕೃತ ಗೈರು ಹಾಜರಿ ಕುರಿತು ಶಿಸ್ತುಕ್ರಮ ಜರುಗಿಸಲು ಬೆಂಗಳೂರು ವಿಭಾಗ, ಸಹ ನಿರ್ದೇಶಕರಿಗೆ ದಿ:31/10/2000ರಲ್ಲಿ ಶಿಫಾರಸ್ಸು ಮಾಡಲಾಯಿತು. ದಿ:5/7/02 ರಲ್ಲಿ ಉಪ ಪ್ರಾಚಾರ್ಯರು, ಪತ್ರ ಬರೆದು ದಿ:19/8/99 ರಿಂದ ಶ್ರೀಮತಿ ಉಷಾ, ಸಶಿ, ಅನಧಿಕೃತ ಗೈರು ಹಾಜರಿ ಆಗಿರುತ್ತಾರೆ. ಇದರಿಂದ ಶಾಲಾ ಪಾಠಪ್ರವಚನಕ್ಕೆ

ತೊಂದರೆ ಆಗಿರುವುದಾಗಿ ವರದಿ ಮಾಡಿರುತ್ತಾರೆ. ಈ ಕುರಿತು ಕ್ರಮತೆಗೆಯಲು ಸಹ ನಿರ್ದೇಶಕರನ್ನು ಕೋರಲಾಗಿತ್ತು. ಈಗ ಶಿಸ್ತು ಪ್ರಾಧಿಕಾರಿಯು ಉಪ ನಿರ್ದೇಶಕರೇ ಆಗಿರುವುದರಿಂದ ಕ್ರಮ ತೆಗೆಯಲು ತಿಳಿಸಿದಂತೆ ಮೊದಲು ಕರ್ತವ್ಯಕ್ಕೆ ಹಾಜರಾಗಲು ದಿ:8/5/03 ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ [ನೋಟಿಸ್] ಪ್ರಕಟಿಸಲಾಗಿದೆ. ಅದರೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಆದ್ದರಿಂದ ಶ್ರೀಮತಿ ಉಷಾ,ಸಶಿ, ರವರ ಮೇಲೆ ಸಿಸಿಎ ನಿಯಮ [11] ರ ಅಡಿಯಲ್ಲಿ ಅನಧಿಕೃತ ಗೈರು ಹಾಜರಿ ಕುರಿತು ದೋಷಾರೋಪಣಾ ಪಟ್ಟಿ ಜಾರಿ ಮಾಡಲಾಯಿತು. ನೀಡಿದ ಅವಧಿ ಮುಗಿದರೂ ರಕ್ಷಣ ಹೇಳಿಕೆ ಬಾರದೇ ಇರುವ ಕಾರಣ ಪ್ರಕರಣ ಸತ್ಯಾಸತ್ಯತೆ ಕಂಡು ಕೊಳ್ಳಲು ಸಿಸಿಎ ನಿಯಮ–11[5]ರ ಅಡಿಯಲ್ಲಿ ವಿಚಾರಣಾಧಿಕಾರಿ ಮಂಡನಾಧಿಕಾರಿಯವರನ್ನು ನೇಮಿಸಲಾಯಿತು. ವಿಚಾರಣೆ ನಡೆಸಿ ಎಷ್ಟು ಕಾಲಾವಕಾಶ ನೀಡಿದರೂ ವಿಚಾರಣೆಗೆ ಹಾಜರಾಗಲಿಲ್ಲಾ ಎಂದು ವರದಿ ನೀಡಿ ದಿ:19/8/99 ರಿಂದ ಈವರೆಗೆ ಒಟ್ಟು 08 ವರ್ಷಗಳ ಕಾಲ ಶಾಲಾ ಕೆಲಸಕ್ಕೆ ಅನಧಿಕೃತ ಗೈರು ಹಾಜರಿ ಆಗಿರುತ್ತಾರೆ. ಮಾಡಿದ ಆರೋಪವು ಸಾಬಿತಾಗಿರುತ್ತದೆ ಎಂದು ವಿಚಾರಣಾ ವರದಿ ನೀಡಿರುತ್ತಾರೆ. ವಿಚಾರಣಾ ವರದಿಯಂತೆ ಆರೋಪ ಸಾಬಿತಾಗಿದೆ ಎಂದು ಅಂತಿಮ ನೋಟೀಸ್ ನೀಡಿ ರಾಜ್ಯ ದಿನ ಪತ್ರಿಕೆಯಲ್ಲಿ ದಿನಾಂಕ:5/6/07 ರಲ್ಲಿ ಪ್ರಕಟಿಸಿ ಕರ್ತವ್ಯಕ್ಕೆ ಹಾಜರಾಗಲು ತಿಳಿಸಲಾಗಿತ್ತು. ಆದರೂ ಈವರೆವಿಗೂ ಕರ್ತವ್ಯಕ್ಕೆ ಹಾಜರಾಗದ ಕಾರನ ಶ್ರೀಮತಿ ಉಷಾ, ಸಶಿ, ರವರ ದೀರ್ಘಕಾಲದ [08 ವರ್ಷ] ಅನಧಿಕೃತ ಗೈರು ಹಾಜರಿ ಆಗಿರುವ ಕಾರಣ ಶ್ರೀ. ಜಿ. ನಾಗೇಂದ್ರಪ್ಪ, ಉಪ ನಿರ್ದೇಶಕರು ಆದ ನನಗೆ ದಿ:3/6/05 ಹಾಗೂ 30/6/05 ರಂದು ನೀಡಿದ ಅಧಿಕಾರವನ್ನು ಚಲಾಯಿಸಿ ಕೆ.ಸಿ.ಎಸ್.ಆರ್ [ಸಿಸಿಎ] ನಿಯಮ–8[8] ರಂತೆ ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸಿ ಆದೇಶಿಸಿದೆ.

ಸಂಬಂಧಿಸಿದವರ ಸೇವಾ ಪುಸ್ತಕದಲ್ಲಿ ನಮೂದಿಸಿ ಈ ಆದೇಶದ ಪ್ರತಿ ಅಂಟಿಸಿ, ವರದಿ ಮಾಡಲು ತಿಳಿಸಿದೆ.

**ಜಿ. ನಾಗೇಂದ್ರಪ್ಪ**
ಉಪನಿರ್ದೇಶಕರು,
ಸಾರ್ವಜನಿಕ ಶಿಕ್ಷಣ ಇಲಾಖೆ, ಚಿತ್ರದುರ್ಗ

ಪಿ.ಆರ್. 919

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಮಂಡ್ಯ ಉಪವಿಭಾಗ–2 ಮಂಡ್ಯ ಇವರ ನ್ಯಾಯಾಲಯ

**ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ/ಸಿಆರ್:39:07 ದಿನಾಂಕ:20ನೇ ಜುಲೈ 2007**

| ಅರ್ಜಿದಾರರು: | ವಿರುದ್ಧ | ಪ್ರತಿವಾದಿಗಳು: |
|---|---|---|
| 1) ಶ್ರೀಮತಿ ಶಶಿಕಲಾ ಕೆ.ಎಂ. ವೈಫ್ ಆಫ್ ಲೇಟ್ ರಮೇಶ @ ಮಂಜು<br>2) ಶಶಾಂಕ್ ಬಿನ್ ಲೇಟ್ ರಮೇಶ್ @ ಮಂಜು<br>3) ಶ್ರೇಯಸ್ ಬಿನ್ ಲೇಟ್ ರಮೇಶ್ @ ಮಂಜು<br>4) ಚಿಕ್ಕತಾಯಮ್ಮ ವೈಫ್ ಆಫ್ ಹುಚ್ಚೀರೇಗೌಡ<br>ವಾಸ: ಕೊನ್ನಹಳ್ಳಿ ಗ್ರಾಮ ಮಂಡ್ಯ ತಾಲ್ಲೂಕು ಮತ್ತು ಜಿಲ್ಲೆ | | 1) ಧನ್ ಪ್ರಕಾಶ್ ರೆಡಿ ಬಿ.ಪಿ. ನಂ. 25, 18ನೇ ಕ್ರಾಸ್, ಮಹದೇಶ್ವರ ಲೇಔಟ್, 18ನೇ ಮೈನ್ ಬಿ.ಟಿ.ಎಂ. ಲೇಔಟ್, ಬೆಂಗಳೂರು<br>2) ದಿ ಬ್ರಾಂಚ್ ಮ್ಯಾನೇಜರ್, ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ.ಲಿ., ನಂ. 22, ವಿ.ಸಿ. ಪ್ಲಾಜ, ಡಾ: ಡಿ.ವಿ.ಜಿ. ರಸ್ತೆ, ಬಸವನಗುಡಿ, ಬೆಂಗಳೂರು |

**ಪ್ರಕಟಣೆ:**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ:18–7–2007 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, 1ನೇ ಅರ್ಜಿದಾರರ ಪತಿ, 2 ಮತ್ತು 3ನೇ ಅರ್ಜಿದಾರರ ತಂದೆ ಹಾಗೂ 4ನೇ ಅರ್ಜಿದಾರರ ಮಗ ಇವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು ನಿಗಧಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

**ಬಿ. ಗೋವಿಂದಪ್ಪ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,
ಮಂಡ್ಯ ಉಪವಿಭಾಗ–2, ಮಂಡ್ಯ

ಪಿ.ಆರ್. 990

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಉಪವಿಭಾಗ–1 ಚಿಕ್ಕಮಗಳೂರು ಜಿಲ್ಲೆ**
**ಸಂಖ್ಯೆ:ಕಾಪಕಾ/ಎಫ್–49/2007, ದಿನಾಂಕ:15ನೇ ಜೂನ್ 2007**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1) ಶ್ರೀಮತಿ ಗಾಯತ್ರಿ 45 ವರ್ಷ ವಯಸ್ಸು ಕೋಂ ಬಿ.ಎಸ್. ರಾಮಣ್ಣ
2) ಶ್ರೀ ಬಿ.ಆರ್. ಸಂದೇಶ 22 ವರ್ಷ ವಯಸ್ಸು ಬಿನ್ ಬಿ.ಎಸ್. ರಾಮಣ್ಣ
ವಾಸ:ಹನುಮಂತನಗರ, ಶೃಂಗೇರಿ–577 139.

1) ಶ್ರೀ. ಬಿ.ಎಸ್. ಉಮೇಶ ಬಿನ್ ಶಂಕರಪ್ಪಗೌಡ, 30 ವರ್ಷ ವಯಸ್ಸು ವಾಸ:ದನಶಾಲೆ, ಮಾಲೀಕರು, ಶಿವಶಂಕರ ಬಸ್, ಬಿಜ್ಜುವಳ್ಳಿ ಅಂಚೆ ತೀರ್ಥಹಳ್ಳಿ ತಾ: ಶಿವಮೊಗ್ಗ ಜಿಲ್ಲೆ
2) ಮೆ: ಓರಿಯಂಟಲ್ ಇನ್ಸುರೆನ್ಸ್ ಕಂಪನಿ ಲಿಮಿಟೆಡ್, ವಿನಾಯಕ ಕಾಂಪ್ಲೆಕ್ಸ್, ಗಾರ್ಡನ್ ಏರಿಯ, 1ನೇ ತಿರುವು ಶಿವಮೊಗ್ಗ ಪ್ರತಿನಿಧಿಸುವವರು: ಶಾಖಾ ವ್ಯವಸ್ಥಾಪಕರು.

ಶ್ರೀ ಬಿ.ಎಸ್ .ರಾಮಣ್ಣ ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿ:1–12–2006ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ, ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರೂ ಇಲ್ಲ ಎಂದು ಪರಿಗಣಿಸಿ ಕ್ಲೇಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಎನ್. ರಾಮಕೃಷ್ಣ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪವಿಭಾಗ–1, ಚಿಕ್ಕಮಗಳೂರು

ಪಿ.ಆರ್. 917

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಉಪವಿಭಾಗ–1 ವಿಜಾಪುರ ಜಿಲ್ಲೆ ವಿಜಾಪುರ**
**ಸಂಖ್ಯೆ:ಡಬ್ಲ್ಯೂಸಿಎ/ಎಸ್ಆರ್:270/07, ದಿನಾಂಕ: 12ನೇ ಜುಲೈ 2007**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1) ಮಂಗಲ ಸಂಭಾಜಿಜಾಧವ
2) ಪೂಜಾ ಸಂಭಾಜಿಜಾಧವ
3) ಪಂಕಜ ಸಂಭಾಜಿ ಜಾಧವ
4) ವಿಠೋಭಾ ವಿಶ್ವನಾಥಜಾಧವ
5) ಜನಾಭಾಮಿ ವಿಠೋಬಾ ಜಾಧವ

1) ದತ್ತಾತ್ರೇಯ ರಂಗನಾಥ ದಿಕ್ಷೀತ ಆಟೋ ರಿಕ್ಷಾ ಮಾಲೀಕರು ನಂ MH/13/G/4148, ತಾ, 127, ಹತ್ತುರೆನಗರ ಹೋಟಗಿ ರೋಡ ಸೋಲಾಪುರ
2) ದಿ ನ್ಯೂ ಇಂಡಿಯಾ ಅಶ್ಸುರೆನ್ಸ್ ಕಂ ಗುಲಬರ್ಗಾ

**ಪ್ರಕಟಣೆ:**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ಸಂಭಾಜಿ ವಿಠೋಬಾ ಜಾಧವ ಇವರು ಪ್ರತಿವಾದಿಗಳ ಬಳಿ ಕಎಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:15–6–07 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲಿ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು ಹಾಗೂ ನಿಗಧಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳನ್ನು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

**ಎಂ.ಡಿ. ಇಂಡಿ**
ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪವಿಭಾಗ–1, ವಿಜಾಪೂರ

ಪಿ.ಆರ್. 980

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ**

**ಪ್ರಕಟಣೆ**

**ಪ್ರಕಟಣೆ: ಸಂ/ಕಾಸಕೊ/ಕಾನಪ/78/2007 ದಿನಾಂಕ:10ನೇ ಜುಲೈ 2007**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1) ಮೆಹೆಬೂಬ ಗಮಡ ಕಾಸೀಂಸಾಬ@ ಕಾಸೀಮಲಿ ಹರ್ಲಾಪುರ
2) ಸದ್ದಾಂಹುಸೇನ್ ತಂದೆ ಕಾಸೀಂಸಾಬ @ ಕಾಸೀಮಲಿ ಹರ್ಲಾಪುರ,
3) ಸಿರ್ಮಾನ್ ತಂದೆ ಕಾಸೀಂಸಾಬ @ ಕಾಸೀಮಲಿ ಹರ್ಲಾಪುರ
4) ನವಾಜ್ ತಂದೆ ಕಾಸೀಂಸಾಬ @ ಕಾಸೀಮಲಿ ಹರ್ಲಾಪುರ
5) ರಾಜಮಾ ಗಂಡ ರಾಜೇಸಾಬ ಹರ್ಲಾಪುರ, ಶ್ರೀಶೈಲ ನಗರ, ಕಾತರಕಿ ರೋಡ್, ಕೊಪ್ಪಳ

ಪ್ರತಿವಾದಿಗಳು:
1) ಶ್ರೀ ಕಮಲ್‌ಚಂದ ತಂದೆ ಮಾಣೀಕ್ ಚಂದ್ ಜಂಗಡಾ, ಸಾ: ಜವಾಹರ ರೋಡ್, ಕೊಪ್ಪಳ
2) ಡಿವಿಜನಲ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಸುರೆನ್ಸ್ ಕಂ.ಲಿ ಬಳ್ಳಾರಿ

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಕಾಸೀಂಸಾಬ @ ಕಾಸೀಮಲಿ ತಂದೆ ರಾಜೇಸಾಬ ಹರ್ಲಾಪುರ, ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:4/4/2006 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಮೆಹಬೂಬಿ, ಸದ್ದಾಂಹುಸೇನ್, ಸಿರ್ಮಾನ್, ನವಾಜ್ ಮತ್ತು ರಾಜಮಾ ಎಂಬುವವರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರು ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳಿಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರು, ಕೊಪ್ಪಳ ಜಿಲ್ಲೆ, ಕೊಪ್ಪಳ

ಪಿ.ಆರ್. 984

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು ಗದಗ ಜಿಲ್ಲೆ ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಕಾಅಗ:ಕಾನಪ :ಎಫ್–101/2007, ದಿನಾಂಕ:26ನೇ ಜುಲೈ 2007**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1) ಹಟಲ್‌ಸಾಬ ಬಾಬುಸಾಬ ನದಾಫ್ ಅಂಚೆ:ಅವರಾಧಿ, ರಾಮದುರ್ಗ ತಾ: ಬೆಳಗಾಂವ ಜಿಲ್ಲೆ
2) ಬಡಿಮ W/o ಹಟಲಸಾಬ್ ನದಾಫ್ ಅಂಚೆ: ಅವರಾಧಿ, ರಾಮದುರ್ಗ ತಾ: ಬೆಳಗಾಂವ ಜಿಲ್ಲೆ ಹಾಲಿವಸ್ತಿ: ಅರಶಿನಗುಡಿ, ನರಗುಂದ ತಾ: ಗದಗ ಜಿಲ್ಲೆ

ಪ್ರತಿವಾದಿಗಳು:
1) ಪ್ರಕಾಶ್ ಪರಮಾನಂದ ಪಾಟೀಲ ಕರ್ನಾಟಕ ಸಿಮೆಂಟ್ ಲೈಪ್ ಫ್ಯಾಕ್ಟರಿ ಇಂಡಸ್ಟ್ರಿಯಲ್ ಎಸ್ಟೇಟ್, ಗೋಕುಲ ರಸ್ತೆ, ಹುಬ್ಬಳ್ಳಿ, ಧಾರವಾಡ ಜಿಲ್ಲೆ
2) ದಿ ಬ್ರಾಂಚ್ ಮೇನೇಜರ್ ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ. ರೇಣುಕಾ ಆರ್ಕೆಡ್, ಸ್ಟೇಷನ್ ರಸ್ತೆ ಗದಗ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ: ಹಟಲ್ ಸಾಬ ಬಾಬುಸಾಬ ನದಾಫ್ 2) ಬಡಿಮ W/o ಹಟಲಸಾಬ್ ನದಾಫ್ ಇವರು ತಾವು ಮೃತ ಮೊಹಮ್ಮದ್ S/o ಹಟಲಸಾಬ್ ನಧಾಫ್ ಇವರ ತಂದೆ ಮತ್ತು ತಾಯಿ ಎಂದೂ, ಅವರ ಮರಣದಿಂದ ನಷ್ಟಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮೊಹಮ್ಮದ್ S/o ಹಟಲಸಾಬ್ ನಧಾಫ್ ಇವರು ಒಂದನೇ ಪ್ರತಿವಾದಿಗಳಾದ ಪ್ರಕಾಶ್ ಪರಮಾನಂದ ಪಾಟೀಲ ಇವರಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಎಂದು ಪರಿಗಣಿಸಬೇಕೆಂದು

ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಗದಗ ಜಿಲ್ಲೆ ಗದಗ ಹಾಗೂ ಕಾರ್ಮಿಕ
ಪಿ.ಆರ್. 1023 ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು ಗದಗ ಜಿಲ್ಲೆ ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಕಾಅಗ/ಕಾನಪ/ಎಫ್-100/2007/409, ದಿನಾಂಕ:26ನೇ ಜುಲೈ 2007**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1) ಶ್ರೀಮತಿ ಶೀಲಾ W/o ಸಿದ್ದಪ್ಪ ಮಲ್ಲಸಮುದ್ರ ಸಾ:ಪಾಪನಾಶಿ ವಿಲೇಜ್ ಗದಗ ತಾ: ಜಿ:
2) ಕು. ಪವಿತ್ರ D/o ಸಿದ್ದಪ್ಪ ಮಲ್ಲಸಮುದ್ರ ವಯಸ್ಸು-9 ಸಾ:ಪಾಪನಾಶಿ ವಿಲೇಜ್ ಗದಗ ತಾ: ಜಿ:

1) ಆರ್.ಎನ್. ನಾಯ್ಕ್ ಅ್ಯಂಡ್ ಸನ್ಸ್ ನಾಯ್ಕ್ ಚೇಂಬರ್ಸ್, ರಾಜ್ ನಗರ, ಹುಬ್ಬಳ್ಳಿ
2) ದಿ ಡಿವಿಜನಲ್‌ಮೇನೇಜರ್ ಯುನೈಟೆಡ್ ಇಂಡಿಯ ಇನ್ಸೂರೆನ್ಸ್ ಕಂ.ಲಿ . ಎನ್ಕೆ ಕಾಂಪ್ಲೆಕ್ಸ್, ಕೇಶ್ವಾಪುರ ಹುಬ್ಬಳ್ಳಿ

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ: ಶೀಲಾ W/o ಸಿದ್ದಪ್ಪ ಮಲ್ಲಸಮುದ್ರ ಸಾ: ಪಾಪನಾಶಿ ಲಿಲೇಜ್, ಗದಗ ತಾ:ಜಿ: 2) ಕು: ಪವಿತ್ರ D/o ಸಿದ್ದಪ್ಪ ಮಲ್ಲಸಮುದ್ರ ಸಾ: ಪಾಪನಾಶಿ ವಿಲೇಜ್ ಗದಗ ತಾ: ಜಿ: ಇವರು , ತಾವು ಮೃತ ಸಿದ್ದಪ್ಪ ಅಂದಪ್ಪ ಮಲ್ಲಸಮುದ್ರ ಇವರ ಹೆಂಡತಿ ಮತ್ತು ಮಗಳು ಎಂದು, ಅವರ ಮರಣದಿಂದ ನಷ್ಟಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸರುತ್ತಾರೆ. ಮೃತ ಸಿದ್ದಪ್ಪ ಅಂದಪ್ಪ ಮಲ್ಲಸಮುದ್ರ ಇವರು ಒಂದನೇ ಪ್ರತಿವಾದಿಗಳಾದ ಆರ್.ಎನ್. ನಾಯ್ಕ್ ಅ್ಯಂಡ್ ಸನ್ಸ್ ನಾಯ್ಕ್ ಚೇಂಬರ್ಸ್, ರಾಜ್‌ನಗರ, ಹುಬ್ಬಳ್ಳಿ ಇವರಲ್ಲಿ ಸೂಪರ್‌ವೈಸರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಗದಗ ಜಿಲ್ಲೆ ಗದಗ ಹಾಗೂ ಕಾರ್ಮಿಕ
ಪಿ.ಆರ್. 1022 ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು ಗದಗ ಜಿಲ್ಲೆ ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಕಾಅಗ/ಕಾನಪ/ಎಫ್-98/2007/395, ದಿನಾಂಕ:26ನೇ ಜುಲೈ 2007**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1) ಶ್ರೀ ಅಬ್ದುಲ್‌ಸಾಬ್ S/o ಪೀರಸಾಬ್ ಬೆಂತೂರು ಸಾ: ದುಂಡೂರು, ಗದಗ ತಾ:ಜಿ
2) ಶ್ರೀಮತಿ ಕಾತುನಬಿ W/o ಅಬ್ದುಲ್ ಸಾಬ್ ಬೆಂತೂರು, ಸಾ: ದುಂಡೂರು, ಗದಗ ತಾ:ಜಿ

1) ಶ್ರೀ ದೊಡ್ಡವೀರಾಚಾರ್, ಬ್ರಾಂಚ್ ಆಫೀಸರ್, ಬೆಸ್ಕಾಂ ಭರಮಸಾಗರ, ಚಿತ್ರದುರ್ಗ ತಾ: ಜಿ:
2) ಶ್ರೀ ಆಂಜನೆ S/o ವೀರಸ್ವಾಮಿ, ಎಲೆಕ್ಟ್ರಿಕ್ ಕಾಂಟ್ರಾಕ್ಟರ್ M/S ಡೈಮಂಡ್ ಎಲೆಕ್ಟ್ರಿಕಲ್ಸ್, ಸ್ಟೇಷನ್ ರಸ್ತೆ, ಬಳ್ಳಾರಿ
3) ಯುನೈಟೆಡ್ ಇಂಡಿಯ ಇನ್ಸೂರೆನ್ಸ್ ಕಂ.ಲಿ. ರಾಘವಚಾರಿ ರಸ್ತೆ, ಬಳ್ಳಾರಿ-583101
4) ದಿ ಡಿವಿಜನಲ್ ಮೇನೇಜರ್ ಯುನೈಟೆಡ್ ಇಂಡಿಯ ಇನ್ಸೂರೆನ್ಸ್, ಕಂ.ಲಿ. ಪಿ.ಬಿ. ರಸ್ತೆ, ಧಾರವಾಡ

**ಪ್ರಕಟಣೆ**

ಅರ್ಜಿದಾರರಾದ ಶ್ರೀ: 1) ಅಬ್ದುಲ್‌ಸಾಬ್ S/o ಪೀರಸಾಬ್ ಬೆಂತೂರು 2) ಶ್ರೀಮತಿ ಕಾತುನಬಿ W/o ಅಬ್ದುಲ್ ಸಾಬ್ ಬೆಂತೂರು ಸಾ: ದುಂಡೂರು, ಗದಗ ತಾ:ಜಿ ಇವರು , ತಾವು ಮೃತ ಟಿಪ್ಪುಸುಲ್ತಾನ್ S/o ಅಬ್ದುಲ್‌ಸಾಬ್ ಬೆಂತೂರು ಇವರ ತಂದೆ ಮತ್ತು ತಾಯಿ ಎಂದು, ಅವರ ಮರಣದಿಂದ ನಷ್ಟಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಟಿಪ್ಪುಸುಲ್ತಾನ್ S/o ಅಬ್ದುಲ್‌ಸಾಬ್ ಬೆಂತೂರು ಇವರು ಎರಡನೇ ಪ್ರತಿವಾದಿಗಳಾದ ಶ್ರೀ ಆಂಜನೆ S/o ವೀರಸ್ವಾಮಿ ಸ್ಟೇಷನ್ ರಸ್ತೆ, ಬಳ್ಳಾರಿ ಇವರಲ್ಲಿ ಕಾರ್ಮಿಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ

ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಗದಗ ಜಿಲ್ಲೆ ಗದಗ ಹಾಗೂ ಕಾರ್ಮಿಕ
ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು

ಪಿ.ಆರ್. 1021

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು ಗದಗ ಜಿಲ್ಲೆ ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಕಾಅಗ/ಕಾನಪ/ಎಫ್–29/2006/374, ದಿನಾಂಕ:19ನೇ ಜುಲೈ 2007**

| **ಅರ್ಜಿದಾರರು:** | ವಿರುದ್ಧ | **ಪ್ರತಿವಾದಿಗಳು:** |
|---|---|---|
| 1) ಶ್ರೀಮತಿ ಬಸವ್ವ ಕೋಂ ಹನಮಪ್ಪ ಪೂಜಾರ ಉರ್ಫ ಮಾದರ R/o ತಡಹಾಳ ಹಾಲಿವಸ್ತಿ ಕಸಬಾ ಗಲ್ಲಿ ನರಗುಂದ ಜಿ:ಗದಗ | | 1) ನೂರಸಾಬ ಅಲ್ಲಾಸಾಬ ಬಡೇಖಾನ R/o ತುಪ್ಪದ ಕುರಹಟ್ಟಿ ತಾ: ನವಲಗುಂದ ಜಿ: ಧಾರವಾಡ<br>2) ದಿ ಡಿವಿಜನಲ್ ಮೇನೇಜರ್ ನ್ಯೂ ಇಂಡಿಯಾ ಅಸ್ಸೂರೆನ್ಸ್, ಶ್ರೀನಾಥ ಕಾಂಪ್ಲೆಕ್ಸ್, ಹುಬ್ಬಳ್ಳಿ |

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ: ಬಸವ್ವ ಕೋಂ ಹನಮಪ್ಪ ಪೂಜಾರ ಉರ್ಫ್ ಮಾದರ R/o ತಡಹಾಳ ಹಾಲಿವಸ್ತಿ ಕಸಬಾ ಗಲ್ಲಿ ನರಗುಂದ ಜಿ ಗದಗ ಇವರು ತಾವು ಮೃತ ಹನುಮಪ್ಪ ಪೂಜಾರ ಇವರ ಹೆಂಡತಿ ಮತ್ತು ಎಂದು, ಅವರ ಮರಣದಿಂದ ನಷ್ಟಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಹನುಮಪ್ಪ ಪೂಜಾರ ಇವರು ಒಂದನೇ ಪ್ರತಿವಾದಿಗಳಾದ ನೂರಸಾಬ ಅಲ್ಲಾಸಾಬ ಬಡೇಖಾನ ಇವರಲ್ಲಿ ಕಾರ್ಮಿಕನಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಗದಗ ಜಿಲ್ಲೆ ಗದಗ ಹಾಗೂ ಕಾರ್ಮಿಕ
ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು

ಪಿ.ಆರ್. 1020

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು ಗದಗ ಜಿಲ್ಲೆ ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಕಾಅಗ/ಕಾನಪ/ಎಫ್–27/2007/373, ದಿನಾಂಕ:19ನೇ ಜುಲೈ 2007**

| **ಅರ್ಜಿದಾರರು:** | ವಿರುದ್ಧ | **ಪ್ರತಿವಾದಿಗಳು:** |
|---|---|---|
| 1) ಶ್ರೀಮತಿ ಕಮಲವ್ವ W/o ಲೇಟ್ ಕೃಷ್ಣಪ್ಪ ಜಾದವ್ @ ಲಮಾಣಿ ಮತ್ತು 6 ಜನ ಮಕ್ಕಳು ಸಾ: ಬ್ರಹ್ಮಾನಂದಪುರ (ಬೆಳಧಡಿ ತಾಂಡಾ) ಗದಗ ತಾ: ಜಿ: | | 1) ಕಾರ್ಯದರ್ಶಿಗಳು, ಗ್ರಾಮ ಪಂಚಾಯತಿ ಬೆಳದಡಿ ಗದಗ ಜಿಲ್ಲೆ<br>2) ಕಾರ್ಯನಿರ್ವಾಹಕ ಅಧಿಕಾರಿಗಳು ತಾಲ್ಲೂಕು ಪಂಚಾಯತ್ ಗದಗ |

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ:ಕಮಲವ್ವ W/o ಲೇಟ್ ಕೃಷ್ಣಪ್ಪ ಜಾದವ್ @ ಲಮಾಣಿ ಮತ್ತು 6 ಜನ ಮಕ್ಕಳು ಸಾ: ಬ್ರಹ್ಮಾನಂದಪುರ, ಬೆಳದಡಿ ತಾಂಡಾ. ಗದಗ ತಾ: ಜಿ ಇವರು ತಾವು ಮೃತ ಕೃಷ್ಣಪ್ಪ ಇವರ ಹೆಂಡತಿ ಮತ್ತು ಮಕ್ಕಳು ಎಂದು, ಅವರ ಮರಣದಿಂದ ನಷ್ಟಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಕೃಷ್ಣಪ್ಪ ಇವರು ಒಂದನೇಯ ಪ್ರತಿವಾದಿಗಳಾದ ಕಾರ್ಯದರ್ಶಿ, ಗ್ರಾಮಪಂಚಾಯತಿ ಬೆಳದಡಿ 2ನೇ ಪ್ರತಿವಾದಿ ಕಾ. ನಿರ್ವಾಹಕ ಅಧಿಕಾರಿ ತಾ.ಪಂ. ಗದಗ ಇವರಲ್ಲಿ ವಾಲ್‌ಮನ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ

ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಗದಗ ಜಿಲ್ಲೆ ಗದಗ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು

ಪಿ.ಆರ್. 1019

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂಖ್ಯೆ:ಕಾಅಪಾ/ಕಾನಪ/ಸಿಆರ್–211/07, ದಿನಾಂಕ:12ನೇ ಜೂನ್ 2007**

**ಅರ್ಜಿದಾರರು:**

1) ಶ್ರೀಮತಿ ಲಕ್ಷ್ಮೀದೇವಮ್ಮ ಕೋಂ ಲೇಟ್ ಚಂದ್ರಪ್ಪ

2) ಸಿ. ಸುಧಾಮಣಿ ಬಿನ್ ಲೇಟ್ ಚಂದ್ರಪ್ಪ ಕೇರಾಫ್ ರಾಮಯ್ಯ ನಂ–663/31, 5ನೇ ಮೈನ್ 5ನೇ ಕ್ರಾಸ್, ಹೆಚ್.ಕೆ.ಆರ್. ಸರ್ಕಲ್ ನಿಟ್ಟುವಳ್ಳಿ ಹೊಸಬಡಾವಣೆ ದಾವಣಗೆರೆ

**ವಿರುದ್ಧ**

**ಪ್ರತಿವಾದಿಗಳು:**

1) ಸಿ. ಅಶ್ವಥ್ ನಾರಾಯಣ ಬಿನ್ ಸಿ.ಎಂ. ಚಿಕ್ಕಣ್ಣ ಮಾಲೀಕರು ಟಾಟಾಸುಮೋನಂಕೆಎ–16 ಪಿ.7002 ನಂ.16, 6ನೇ ಕ್ರಾಸ್ ಎಸ್.ಎಸ್. ಪುರಂ ತುಮಕೂರು

2) ವ್ಯವಸ್ಥಾಪಕರು, ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ. ವಿಭಾಗೀಯ ಕಛೇರಿ ನಂ–5, ನಂ–25, ಶಂಕರನಾರಾಯಣ ಬಿಲ್ಡಿಂಗ್, ಎಂ.ಜಿ. ರಸ್ತೆ ಬೆಂಗಳೂರು

**ಪ್ರಕಟಣೆ**

ಶ್ರೀಮತಿ:ಲಕ್ಷ್ಮೀದೇವಮ್ಮ ಮತ್ತು ಸಿ. ಸುಧಾಮಣಿ. ಇವರುಗಳಾದ ತಾವು ಮೃತ ಆರ್ ಮಹಾಂತೇಶ್ ಬಿನ್ ಲೇಟ್ ಚಂದ್ರಪ ಇವರು ತಾಯಿ ಮತ್ತು ಅಕ್ಕ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮಹಾಂತೇಶ್ ಬಿನ್ ಲೇಟ್ ಚಂದ್ರಪ್ಪ ರವರು ಒಂದನೇ ಪ್ರತಿವಾದಿಗಳಾದ ಸಿ. ಅಶ್ವಥ್ ನಾರಾಯಣ ಬಿನ್ ಸಿ.ಎಂ. ಚಿಕ್ಕಣ್ಣ ಇವರ ಟಾಟಾಸುಮೋ ರಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ

ಪಿ.ಆರ್. 1006

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂಖ್ಯೆ:ಕಾಅಪಾ/ಕಾನಪ/ಸಿಆರ್–212/07, ದಿನಾಂಕ:12ನೇ ಜೂನ್ 2007**

**ಅರ್ಜಿದಾರರು:**

1) ವಿರೂಪಾಕ್ಷಪ್ಪ ಉರ್ಫ್ ವಿರೂಪಣ್ಣ

2) ಶ್ರೀಮತಿ ಬಸವಶಿವ್ವ ಕೋಂ ವಿರೂಪಾಕ್ಷಪ್ಪ ಜಾಡರ ಮೇವುಂಡಿ. ಹಾವೇರಿ ತಾಲ್ಲೂಕ್

**ವಿರುದ್ಧ**

**ಪ್ರತಿವಾದಿಗಳು:**

1) ಶ್ರೀಮತಿ ರೇಣುಕಪ್ಪ ಕೋಂ ಪುಂಡಲೀಕಪ್ಪ ಜಾಡರ ಮಾಲೀಕರು ಟ್ರ್ಯಾಕ್ಟರ್ ಟ್ರೈಲರ್ ನಂ. ಕೆಎ–27–ಟಿ–7759–7760, ಮೇವುಂಡಿ ಹಾವೇರಿ ತಾಲ್ಲೂಕು

2) ಡಿವಿಜನಲ್ ಮ್ಯಾನೇಜರ್ ಓರಿಯೆಂಟಲ್ ಇನ್ಸೂರೆನ್ಸ್ ಕಂ.ಲಿ. ಎಸ್ಕೆ ಕಾಂಪ್ಲೆಕ್ಸ್, ಕೇಶ್ವಾಪುರ, ಹುಬ್ಬಳ್ಳಿ

**ಪ್ರಕಟಣೆ**

ಶ್ರೀ: ಶ್ರೀಮತಿ: ವಿರೂಪಾಕ್ಷಪ್ಪ ಉರ್ಫ್ ವಿರೂಪಣ್ಣ ಮತ್ತು ಬಸವಶಿವ್ವ ಇವರುಗಳಾದ ತಾವು ಮೃತ ಶಿವಾನಂದ ವಿರೂಪಾಕ್ಷಪ್ಪ ಜಾಡರ ಇವರು ತಂದೆ ಮತ್ತು ತಾಯಿ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಶಿವಾನಂದ ವಿರೂಪಾಕ್ಷಪ್ಪ ಜಾಡರ ರವರು ಒಂದನೇ ಪ್ರತಿವಾದಿಗಳಾದ ಶ್ರೀಮತಿ ರೇಣುಕವ್ವ ಕೋಂ ಪುಂಡಲೀಕಪ್ಪ ಜಾಡರ ಇವರ ಟ್ರ್ಯಾಕ್ಟರ್ ರಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾದ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ

ಪಿ.ಆರ್. 1007

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ದಾವಣಗೆರೆ ಜಿಲ್ಲೆ, ದಾವಣಗೆರೆ**
**ಪ್ರ.ಸಂಖ್ಯೆ:ಕಾಅಪಾ/ಕಾನಪ/ಸಿಆರ್–208/07, ದಿನಾಂಕ:7ನೇ ಜೂನ್ 2007**

**ಅರ್ಜಿದಾರರು:**
1) ಸೋಮಪ್ಪ ಉರ್ಫ್ ಸ್ವಾಮಿ ತಂದೆ ತಿರುಕಪ್ಪ ಹದಡಿ ಕಟ್ಟಿಹಳ್ಳಿ, ಹಿರೇಕೆರೂರು ತಾ: ಹಾವೇರಿ ಜಿಲ್ಲೆ

**ವಿರುದ್ಧ**

**ಪ್ರತಿವಾದಿಗಳು:**
1) ಫಯಾಜ್ ತಂದೆ ರೆಹಮಾನ್ ಸವಣೂರ ಲಾರಿನಂಕೆಎ–27–6786ರ ಮಾಲೀಕರು, ರಟ್ಟಿಹಳ್ಳಿ ಹಿರೇಕೆರೂರು ತಾ: ಹಾವೇರಿ ಜಿಲ್ಲೆ
2) ಡಿವಿಜನಲ್ ಮ್ಯಾನೇಜರ್ ನ್ಯೂ ಇಂಡಿಯಾ ಇನ್ಸೂರೆನ್ಸ್ ಕಂ.ಲಿ. ನ್ಯೂಕಾಟನ್ ಮಾರ್ಕೆಟ್ ಹುಬ್ಬಳ್ಳಿ
3) ಆರುಂಧತಿ ಕೋಂ ಸ್ವಾಮಿ ಉಫ್ ಸೋಮಪ್ಪ ಹದಡಿ ಕಟ್ಟಿಹಳ್ಳಿ ಹಿರೇಕೆರೂರು ತಾ: ಹಾವೇರಿ ಜಿಲ್ಲೆ
4) ಸುನಿತಾ ತಂದೆ ಸೋಮಪ್ಪ ಹದಡಿ, ರಟ್ಟಿಹಳ್ಳಿ ಹಿರೇಕೆರೂರು ತಾ: ಹಾವೇರಿ ಜಿಲ್ಲೆ
5) ಕೃಷ್ಣ ತಂದೆ ಸೋಮಪ್ಪ ಹದಡಿ ರಟ್ಟಿಹಳ್ಳಿ, ಹಿರೇಕೆರೂರು ತಾ: ಹಾವೇರಿ ಜಿಲ್ಲೆ

**ಪ್ರಕಟಣೆ**

ಶ್ರೀ: ಸೋಮಪ್ಪ ಉರ್ಫ್ ಸ್ವಾಮಿ ಇವರುಗಳಾದ ತಾವು ಮೃತ ಜಗ್ಗೇಶ್ ಇವರು ತಂದೆ ಮತ್ತು ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಜಗ್ಗೇಶ್ ರವರು ಒಂದನೇ ಪ್ರತಿವಾದಿಗಳಾದ ಫಯಾಜ್ ತಂದೆ ರೆಹಮಾನ್ ಸವಣೂರ ಇವರ ಲಾರಿ ರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ

ಪಿ.ಆರ್. 1008

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ದಾವಣಗೆರೆ ಜಿಲ್ಲೆ, ದಾವಣಗೆರೆ**
**ಪ್ರ.ಸಂಖ್ಯೆ:ಕಾಅಪಾ/ಕಾನಪ/ಸಿಆರ್–225/07, ದಿನಾಂಕ:19ನೇ ಜೂನ್ 2007**

**ಅರ್ಜಿದಾರರು:**
ಮಾರುತಿ ಬಿನ್ ಪಾಲಪ್ಪ ರತ್ನಮ್ಮ ಕೋಂ ಮಾರುತಿ ಮುಸ್ತೂರು ಗ್ರಾಮ ಜಗಳೂರು ತಾಲ್ಲೂಕು ದಾವಣಗೆರೆ ಜಿಲ್ಲೆ

**ವಿರುದ್ಧ**

**ಪ್ರತಿವಾದಿಗಳು:**
1) ಕೆ.ಎಸ್. ಶುಜಾದ್ದೀನ್ ಬಿನ್ ಸಾಲವುದ್ದೀನ್ ಆಟೋರಿಕ್ಷಾ ಮಾಲೀಕರು ನಂ.ಕೆಎ–16–8815 ಅಂಜುಮನರಸ್ತೆ, ಹೊರಪೇಟೆ ಚಿತ್ರದುರ್ಗ
2) ಡಿವಿಜನಲ್ ಮ್ಯಾನೇಜರ್ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ. ಡಿವಿಜನಲ್ ಆಫೀಸ್ ಎಂ.ಎಂ. ಆರ್ಕೇಡ್ ಸಿ.ಜಿ. ಆಸ್ಪತ್ರೆ ರಸ್ತೆ,. ದಾವಣಗೆರೆ

**ಪ್ರಕಟಣೆ**

ಶ್ರೀ: ಶ್ರೀಮತಿ ಮಾರುತಿ ಮತ್ತು ರತ್ನಮ್ಮ ಇವರುಗಳಾದ ತಾವು ಮೃತ ಎಂ. ದೊಡ್ಡೇಶ್ ಇವರು ತಂದೆ ಮತ್ತು ತಾಯಿ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಎಂ. ದೊಡ್ಡಶ್ ರವರು ಒಂದನೇ ಪ್ರತಿವಾದಿಗಳಾದ ಕೆ.ಎನ್. ಶುಜಾದ್ದೀನ್ ಬಿನ್ ಸಾಲವುದ್ದೀನ್ ಇವರ ಆಟೋರಿಕ್ಷಾದಲ್ಲಿ ರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ

ಪಿ.ಆರ್. 1009

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂಖ್ಯೆ:ಕಾಅಪಾ/ಕಾನಪ/ಸಿಆರ್–228/07, ದಿನಾಂಕ: 25ನೇ ಜೂನ್ 2007**

**ಅರ್ಜಿದಾರರು:** ಶ್ರೀಮತಿ ಚಿತ್ತಮ್ಮ ಕೋಂ ಲೇಟ್ ವೀರೇಶ್ ಮತ್ತಿತರೆ 5 ಜನರು ಕೆಳಗೋಟೆ ಗ್ರಾಮ ಕಚ್ಚೇನಹಳ್ಳಿ ಅಂಚೆ, ಜಗಳೂರು ತಾಲ್ಲೂಕು ದಾವಣಗೆರೆ ಜಿಲ್ಲೆ

**ವಿರುದ್ಧ**

**ಪ್ರತಿವಾದಿಗಳು:**
1) ಡಿ.ಜಿ. ಸುರೇಶ್ ಬಿನ್ ಗುರುಶಾಂತಪ್ಪ ಕೆ–17ಎ–3170ರ ಟಾಟಾ 407ರ ಸರಕು ವಾಹನದ ಮಾಲೀಕರು ಕೆಳಗೋಟೆ ಗ್ರಾಮ ಕೆಚ್ಚೇನಹಳ್ಳಿ ಅಂಚೆ, ಜಗಳೂರು ತಾಲ್ಲೂಕು ದಾವಣಗೆರೆ ಜಿಲ್ಲೆ
2) ವಿಭಾಗೀಯ ವ್ಯವಸ್ಥಾಪಕರು, ನ್ಯೂ ಇಂಡಿಯಾ ಆಶ್ಯೂರೆನ್ಸ್ ಕಂ.ಲಿ. ವಿಭಾಗೀಯ ಕಛೇರಿ ಎ.ಎಂ. ಆರ್ಕೇಡ್ ಸಿ.ಜಿ. ಆಸ್ಪತ್ರೆ ರಸ್ತೆ, ದಾವಣಗೆರೆ

**ಪ್ರಕಟಣೆ**

ಶ್ರೀ: ಶ್ರೀಮತಿ ಚಿತ್ತಮ್ಮ ಕೋಂ ಲೇಟ್ ವೀರೇಶ್, ಅಂಜಿನಮ್ಮ ಮೇಘಾ, ಉಪೇಂದ್ರ, ವೀರಭದ್ರಪ್ಪ ಬಸಮ್ಮ ಇವರುಗಳಾದ ತಾವು ಮೃತ ವೀರೇಶ್ ಇವರು ಪತ್ನಿ ಮಕ್ಕಳು ಮತ್ತು ತಂದೆ–ತಾಯಿ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ವೀರೇಶ್ ರವರು ಒಂದನೇ ಪ್ರತಿವಾದಿಗಳಾದ ಡಿ.ಜಿ. ಸುರೇಶ್ ಬಿನ್ ಗುರುಶಾಂತಪ್ಪ ಇವರ ಗೂಡ್ಸ್ ವೆಹಿಕಲ್ ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ

ಪಿ.ಆರ್. 1010

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂಖ್ಯೆ:ಕಾಅಪಾ/ಕಾನಪ/ಸಿಆರ್–230/07, ದಿನಾಂಕ: 29ನೇ ಜೂನ್ 2007**

**ಅರ್ಜಿದಾರರು:**
1) ಸತ್ಯಪ್ಪ ಬಿನ್ ವೆಂಕಟಪ್ಪ
2) ತಿಮ್ಮಕ್ಕ ಕೋಂ ವೆಂಕಟಪ್ಪ ಹೊನ್ನೂರು ಗ್ರಾಮ, ದಾವಣಗೆರೆ ತಾಲ್ಲೂಕು

**ವಿರುದ್ಧ**

**ಪ್ರತಿವಾದಿಗಳು:**
1) ಮ್ಯಾನೇಜಿಂಗ್ ಡೈರೆಕ್ಟರ್/ಆಥಾರೈಡ್ಸ್ ಸಿಗ್ ನೇಟರಿ ಸೌತ್ ಇಂಡಿಯಾ ಕಾರ್ಪೋರೇಷನ್ ಆಡ್ ಮಿನಿಸ್ಟ್ರೇಷನ್ ಆಫೀಸ್ ನಂ–43, ರೇಸ್ ಕೋಸ್, ಪಿ.ಬಿ. ನಂ3858 ಕೊಯಮತ್ತೂರು–641018
2) ಮ್ಯಾನೇಜಿಂಗ್ ಡೈರೆಕ್ಟರ್ ರಿಜಿಸ್ಟರ್ಡ್ ಆಫೀಸ್ ಸೌತ್ ಇಂಡಿಯಾ ಕಾರ್ಪೋರೇಚನ್ ನಂ. 603, ಅಣ್ಣಾಮಲೈ ಚನ್ನೈ3–600006
3) ಮ್ಯಾನೇಜರ್ ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ. ಡಿ.ಓ. ನಂ–2 ನಂ–8–ಎಸ್ ಪ್ಲಾನಾಡೆ, ಚನ್ನೈ–3–600108

**ಪ್ರಕಟಣೆ**

ಶ್ರೀ: ಶ್ರೀಮತಿ 1) ಸತ್ಯಪ್ಪ 2) ತಿಮ್ಮಕ್ಕ ಇವರುಗಳಾದ ತಾವು ಮೃತ ರೇವಣ್ಣ@ ರೇವಣಸಿದ್ದಪ್ಪ ಇವರ ತಂದೆ ಮತ್ತು ತಾಯಿ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ರೇವಣ್ಣ@ ರೇವಣ ಸಿದ್ದಪ್ಪರವರು ಒಂದನೇ ಪ್ರತಿವಾದಿಗಳಾದ ಸೌತ್ ಇಂಡಿಯಾ ಕಾರ್ಪೋರೇಷನ್‌ನಲ್ಲಿ ಇವರ ವರ್ಕ್‌ಸೈಟ್ ಯೂನಿವರ್ಸಲ್ ಬಾಟ್ಲರ್ಸ್ ಪ್ರೈ.ಲಿ. ಟಿ. ಬೇಗೂರು ಜಿಲ್ಲೆ ಯಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ

ಪಿ.ಆರ್. 1011

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂಖ್ಯೆ:ಕಾಅಪಾ/ಕಾನಪ/ಸಿಆರ್–231/07, ದಿನಾಂಕ: 29ನೇ ಜೂನ್ 2007**

**ಅರ್ಜಿದಾರರು:**

1) ನೂರ್ ಜಾನ್ ಕೋಂ ಲೇಟ್ ಅಬ್ದುಲ್ ರಜಾಕ್

2) ಮಹಮದ್ ಜಾವೀದ್ ಬಿನ್ ಲೇಟ್ ಅಬ್ದುಲ್‌ರಜಾಕ್

3) ಮುಸ್ಕಾನ್ ಲೇಟ್ ಅಬ್ದುಲ್ ರಜಾಕ್ ರವರ ಮಗಳು

4) ರುಸ್ಕಾನ್ ಲೇಟ್ ಅಬ್ದುಲ್ ರಜಾಕ್ ರವರ ಮಗಳು 1ನೇ ಮುಖ್ಯರಸ್ತೆ, 5ನೇ ಕ್ರಾಸ್, ಶಿವನಗರ, ದಾವಣಗೆರೆ

**ವಿರುದ್ಧ**

**ಪ್ರತಿವಾದಿಗಳು:**

1) ಎಸ್.ಹೆಚ್. ಸೈಪುಲ್ಲಾ ಬಿನ್ ಎಸ್.ಹೆಚ್. ಅನ್ವರ್‌ಸಾಬ್ ಮಾಲೀಕರು ಟ್ರಕ್ ನಂ–ಕೆಎ–08–ಎ–999 ನಂ–4/271, 1ನೇ ಮುಖ್ಯರಸ್ತೆ, 1ನೇ ಕ್ರಾಸ್ ನರಸರಾಜಪೇಟೆ, ದಾವಣಗೆರೆ.

2) ಮ್ಯಾನೇಜರ್ ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ. ಬ್ರ್ಯಾಂಚ್ ಆಫೀಸ್, "ದ್ವಾರಕಾ" ನಂ.–79 ಉತ್ತಮರಗಂದಿ ಸಲೈ, ಚನ್ನೈ–3, ತಮಿಳುನಾಡು

**ಪ್ರಕಟಣೆ**

ಶ್ರೀ: ಶ್ರೀಮತಿ 1) ನೂರ್‌ಜಾನ್ 2) ಮಹಮದ್ ಜಾವೀದ್ 3) ಮುಸ್ಕಾನ್ 4) ರುಸ್ಕಾನ್ ಇವರುಗಳಾದ ತಾವು ಮೃತ ಅಬ್ದುಲ್ ರಜಾಕ್ @ ರಾಜಾಭಕ್ಷಿ ಇವರು ಪತ್ನಿ ಮತ್ತು ಮಕ್ಕಳು ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಅಬ್ದುಲ್ ರಜಾಕ್ @ ರಾಜಾಭಕ್ಷಿ ರವರು ಒಂದನೇ ಪ್ರತಿವಾದಿಗಳಾದ ಎಸ್.ಹೆಚ್.ಸೈಪುಲ್ಲಾ ಬಿನ್ ಎಸ್.ಹೆಚ್. ಅನ್ವರ್ ಸಾಬ್ ಇವರ ಟ್ರಕ್ ರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ

ಪಿ.ಆರ್. 1012

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂಖ್ಯೆ:ಕಾಅಪಾ/ಕಾನಪ/ಸಿಆರ್–238/07, ದಿನಾಂಕ: 7ನೇ ಜುಲೈ 2007**

**ಅರ್ಜಿದಾರರು:**

1) ಚಂದ್ರನಾಯ್ಕ

2) ಕುಮಾರಿ ಜ್ಯೋತಿ

3) ನಾಗರಾಜನಾಯ್ಕ

4) ಅರುಣ

ರುದ್ರಾಪುರ ಗ್ರಾಮ ಚನ್ನಗಿರಿ ತಾಲ್ಲೂಕು, ದಾವಣಗೆರೆಜಿಲ್ಲೆ

**ವಿರುದ್ಧ**

**ಪ್ರತಿವಾದಿಗಳು:**

ಅಫ್ಜಲ್ ಅಲಿಖಾನ್ ಬಿನ್ ರೆಹಮತ್ ಖಾನ್ ಕೆರೆಬಿಳಚಿ ಗ್ರಾಮ, ಚೆನ್ನಗಿರಿ ತಾಲ್ಲೂಕ್ ದಾವಣಗೆರೆ ಜಿಲ್ಲೆ

**ಪ್ರಕಟಣೆ**

ಶ್ರೀ: ಶ್ರೀಮತಿ 1. ಚಂದ್ರನಾಯ್ಕ, 2. ಕುಮಾರಿ ಜ್ಯೋತಿ 3. ನಾಗರಾಜನಾಯ್ಕ 4. ಅರುಣ ಇವರುಗಳಾದ ತಾವು ಮೃತ ಶ್ರೀಮತಿ ಚಂದ್ರಿಬಾಯಿ ಇವರು ಪತಿ ಮತ್ತು ಮಕ್ಕಳು ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಶ್ರೀಮತಿ ಚಂದ್ರಿಬಾಯಿ ರವರು ಒಂದನೇ ಪ್ರತಿವಾದಿಗಳಾದ ಅಫ್ಜಲ್ ಅಲಿಖಾನ್ ಇವರ ಟ್ರ್ಯಾಕ್ಟರ್ ರಲ್ಲಿ ಕೂಲಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ

ಪಿ.ಆರ್. 1013

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂಖ್ಯೆ:ಕಾಅಪಾ/ಕಾನಪ/ಸಿಆರ್-239/07, ದಿನಾಂಕ: 10ನೇ ಜುಲೈ 2007**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1) ಮಂಜಮ್ಮ ಕೋಂ ಲೇಟ್ ಹನುಮಂತಪ್ಪ
2) ಆಕಾಶ್ ಬಿನ್ ಲೇಟ್ ಹನುಮಂತಪ್ಪ
3) ಈರಮ್ಮ ಲೇಟ್ ಹನುಮಂತಪ್ಪರವರ ತಾಯಿ
ಲಿಂಗಾಪುರ ಗ್ರಾಮ ಆನಗೋಡು ಹೋಬಳಿ
ಆಲೂರುಹಟ್ಟಿ ಅಂಚೆ ದಾವಣಗೆರೆ

1) ಕೆ.ಎಸ್. ಬಸವರಾಜಪ್ಪ ಬಿನ್ ಶರಣಪ್ಪ
ಲಾರಿಮಾಲೀಕರು ನಂ:ಕೆಎ-16:ಎ-1935 ಚಿತ್ರದುರ್ಗ
ಗ್ರಾಮ:ಹೊಳಲ್ಕೆರೆ ತಾಲ್ಲೂಕ್ ಚಿತ್ರದುರ್ಗ ಜಿಲ್ಲೆ
2) ಮ್ಯಾನೇಜರ್ ಓರಿಯೆಂಟಲ್ ಇನ್ಸೂರೆನ್ಸ್ ಕಂ.ಲಿ
ತಿಳುವಳ್ಳಿ ಕಾಂಪ್ಲೆಕ್ಸ್ ಪಿ.ಬಿ. ರಸ್ತೆ ದಾವಣಗೆರೆ

**ಪ್ರಕಟಣೆ**

ಶ್ರೀ: ಶ್ರೀಮತಿ 1. ಮಂಜಮ್ಮ 2. ಆಕಾಶ್ 3. ಈರಮ್ಮ ಇವರುಗಳಾದ ತಾವು ಮೃತ ಹನುಮಂತಪ್ಪ ಇವರ ಹೆಂಡತಿ ಮತ್ತು ಮಗ ತಾಯಿ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಹನುಮಂತಪ್ಪ ರವರು ಒಂದನೇ ಪ್ರತಿವಾದಿಗಳಾದ ಕೆ.ಎಸ್. ಬಸವರಾಜಪ್ಪ ಬಿನ್ ಶರಣಪ್ಪ ಇವರ ಲಾರಿಯಲ್ಲಿ ಹಮಾಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ
ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ

ಪಿ.ಆರ್. 1014

**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ**

**ತಿದ್ದುಪಡಿ**

**ಸಂ:ಅಪಜೀ 51 ಹುಸೃಮು 2007 ಬೆಂಗಳೂರು, ದಿನಾಂಕ:10ನೇ ಜುಲೈ 2007**

ಅಧಿಸೂಚನೆ ಸಂ:ಅಪಜೀ 15 ಹುಸೃಮು 99, ದಿನಾಂಕ:20-10-2000 ರಲ್ಲಿ ಪ್ರಕಟಿಸಲಾದ ಅರಣ್ಯ ಇಲಾಖೆಯ "ಪತ್ರಾಂಕಿತ ವ್ಯವಸ್ಥಾಪಕ" ವೃಂದದ ಅಂತಿಮ ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ 26ರಲ್ಲಿರುವ ಶ್ರೀ ಹೆಚ್.ವಿ. ವಾದಿರಾಜ್ ರವರ ಹೆಸರಿನ ಕೆಳಗೆ ಹಾಗೂ ಕ್ರಮಸಂಖ್ಯೆ 27ರಲ್ಲಿರುವ ಶ್ರೀ ಎಂ. ನಾರಾಯಣಪ್ಪ ರವರ ಹೆಸರಿನ ಮೇಲೆ ಶ್ರೀ ಹೆಚ್.ಹೆಚ್. ವಿಠೋಬರಾವ್, ಪತ್ರಾಂಕಿತ ವ್ಯವಸ್ಥಾಪಕರ ಈ ಕೆಳಕಂಡ ಹೆಸರನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

| ಕ್ರ. ಸಂ. | ಹೆಸರು ಶ್ರೀ/ಶ್ರೀಮತಿ | ಮೀಸಲಾತಿ ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿ ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|
| 26 | XXX | XXX | XXX | XXX | XXX | XXX |
| 26(ಎ) | ಹೆಚ್.ಹೆಚ್. ವಿಠೋಬರಾವ್ | ಸಾಮಾನ್ಯ | 1-4-1951 | 10-3-1977 | 5-2-1997 | 5-2-1997 |
| 27 | XXX | XXX | XXX | XXX | XXX | XXX |

ಅದೇ ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ 27ರ 2ನೇ ಅಂಕಣದಲ್ಲಿ ನಮೂದಾಗಿರುವ "ಎಂ. ನಾರಾಯಣಪ್ಪ" ಹೆಸರನ್ನು ತಿದ್ದಿ "ಎನ್ ನಾರಾಯಣಪ್ಪ" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ
(ಅರಣ್ಯ ಸೇವೆಗಳು)

ಪಿ.ಆರ್. 970